*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-I | ಬೆಂಗಳೂರು, ಶುಕ್ರವಾರ, ಜುಲೈ ೦೧, ೨೦೧೬ (ಆಷಾಢ ೧೦, ಶಕ ವರ್ಷ ೧೯೩೮) | ನಂ. ೮೮೭ |
|---|---|---|
| *Part-I* | *Bengaluru, Friday, July 01, 2016 (Ashada 10 Shaka Varsha 1938)* | *No. 887* |


## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** 2016-17ನೇ ಸಾಲಿನಲ್ಲಿ ಮಾಡುವ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ:-**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013, ಬೆಂಗಳೂರು ದಿನಾಂಕ: 07.06.2013.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013, ಬೆಂಗಳೂರು ದಿನಾಂಕ: 14.06.2013.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸೇನೌವ 2014, ಬೆಂಗಳೂರು ದಿನಾಂಕ: 06.02.2014.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸೇನೌವ 2015, ಬೆಂಗಳೂರು ದಿನಾಂಕ: 27.04.2015.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಸೇನೌವ 2015, ಬೆಂಗಳೂರು ದಿನಾಂಕ: 01.10.2015.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸೇನೌವ 2015, ಬೆಂಗಳೂರು ದಿನಾಂಕ: 14.10.2015.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸೇನೌವ 2016, ಬೆಂಗಳೂರು ದಿನಾಂಕ: 31.05.2016.

**ಪ್ರಸ್ತಾವನೆ:-**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಕುರಿತಂತೆ ವಿಸ್ತೃತವಾದ ಮಾರ್ಗಸೂಚಿಗಳನ್ನು ನೀಡಲಾಗಿದೆ. ಈ ಮಾರ್ಗಸೂಚಿಗಳ ಪ್ರಕಾರ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಪ್ರತಿ ವರ್ಷ ಮೇ ಮತ್ತು ಜೂನ್ ತಿಂಗಳುಗಳಲ್ಲಿ ಮಾತ್ರ ಸದರಿ ಮಾರ್ಗಸೂಚಿಗಳಲ್ಲಿರುವ ಷರತ್ತುಗಳಿಗೊಳಪಟ್ಟು ಮಾಡಬಹುದಾಗಿದೆ.

ಪ್ರಸ್ತುತ 2016-17 ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಬಗ್ಗೆ ಮೇಲೆ ಓದಲಾದ ದಿನಾಂಕ: 31.05.2016ರ ಆದೇಶದಲ್ಲಿ ದಿನಾಂಕ: 30.06.2016 ರವರೆಗೆ ವರ್ಗಾವಣೆಗಳನ್ನು ಮಾಡಬಹುದೆಂದು ಆದೇಶಿಸಲಾಗಿದೆ. ವರ್ಗಾವಣೆ ಅವಧಿಯನ್ನು ಮತ್ತೆ ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸೇನೌವ 2016 ಬೆಂಗಳೂರು, ದಿನಾಂಕ: 30.06.2016**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಮೇಲೆ ಉಲ್ಲೇಖ 1 ರಿಂದ 7ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ನಮೂದಿಸಿರುವ ಷರತ್ತುಗಳೊಂದಿಗೆ ಸರ್ಕಾರಿ ನೌಕರರ ವರ್ಗಾವಣೆಗಳನ್ನು **ದಿನಾಂಕ: 15.07.2016** ರೊಳಗೆ ಪೂರ್ಣಗೊಳಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಗಾಯತ್ರಿ ಎಂ.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–*I* | ಬೆಂಗಳೂರು, ಮಂಗಳವಾರ, ಜುಲೈ ೦೫, ೨೦೧೬ (ಆಷಾಢ ೧೪, ಶಕ ವರ್ಷ ೧೯೩೮) | ನಂ. ೮೯೪ |
| ***Part–I*** | ***Bengaluru, Tuesday, July 05, 2016 (Ashada 14 Shaka Varsha 1938)*** | ***No. 894*** |


**ಕಾನೂನು ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: ಕರ್ನಾಟಕ ಸರ್ಕಾರ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಗಳನ್ನು ನೇಮಿಸುವ ಬಗ್ಗೆ

**ಓದಲಾಗಿದೆ:**

1. ಸರ್ಕಾರದ ಆದೇಶ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14.03.2016.
2. ಸರ್ಕಾರದ ಆದೇಶ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22.06.2016.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿನ ಆದೇಶದಲ್ಲಿ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಓದಲಾದ (2) ರಲ್ಲಿನ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ: 14.03.2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7 ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ / ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ / ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ / ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ. ಈ ಆದೇಶದ ಆದೇಶ ಭಾಗದ ಕಂಡಿಕೆ (1)ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳ ನಂತರದ (officer next in seniority) ಅಧಿಕಾರಿಯನ್ನು ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರದ ಸಚಿವಾಲಯದ ಕಾನೂನು ಇಲಾಖೆಗೆ ಸಂಬಂಧಿಸಿದಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 51 ಎಲ್‌ಸಿಇ 2016, ಬೆಂಗಳೂರು, ದಿನಾಂಕ: 04.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ಸರ್ಕಾರದ ಸಚಿವಾಲಯದ ಕಾನೂನು ಇಲಾಖೆಗೆ ಸಂಬಂಧಿಸಿದಂತೆ, ಈ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ನಂತರದ ಅಧಿಕಾರಿಯಾದ (officer next in seniority) ಸರ್ಕಾರದ ಅಪರ ಕಾರ್ಯದರ್ಶಿ (ಅಭಿಪ್ರಾಯ), ಕಾನೂನು ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ವಿಧಾನ ಸೌಧ, ಬೆಂಗಳೂರು–1 ಇವರನ್ನು ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಉಮೇಶ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–*I* | ಬೆಂಗಳೂರು, ಬುಧವಾರ, ಜುಲೈ ೦೬, ೨೦೧೬ (ಆಷಾಢ ೧೫, ಶಕ ವರ್ಷ ೧೯೩೮) | ನಂ. ೮೯೭ |
| ***Part–I*** | ***Bengaluru, Wednesday, July 06, 2016 (Ashada 15 Shaka Varsha 1938)*** | ***No. 897*** |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಸಿಆಸುಇ 568 ಸೇನೆನಿ 2015, ಬೆಂಗಳೂರು, ದಿನಾಂಕ:06/07/2016**

**ವಿಷಯ** : ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿ ಕಲ್ಪಿಸಲಾಗಿರುವ ಗರಿಷ್ಠ ವಯೋಮಿತಿಯ ಸಡಿಲಿಕೆಯನ್ನು ಸರ್ಕಾರದ ಎಲ್ಲಾ ಇಲಾಖೆಗಳು ಆಯಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಳ್ಳುವ ಬಗ್ಗೆ

ರಾಜ್ಯ ಸಿವಿಲ್ ಸೇವಾ ಹುದ್ದೆಗಳ ನೇರ ನೇಮಕಾತಿಯಲ್ಲಿ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 6(3)(ಸಿ)ರಡಿ ಈ ಕೆಳಕಂಡಂತೆ ಗರಿಷ್ಠ ವಯೋಮಿತಿಯನ್ನು ಸಡಿಲಿಸಲು ಆಸ್ಪದ ಕಲ್ಪಿಸಲಾಗಿರುತ್ತದೆ.

"In the case of a candidate who is an ex-serviceman, by three years plus the number of years of service rendered by him in the Armed Forces of the Union;"

ಆದಾಗ್ಯೂ ಕೆಲವು ಇಲಾಖೆಗಳು ರೂಪಿಸಿಕೊಂಡಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ / ವಿಶೇಷ ನಿಯಮಾವಳಿಗಳಲ್ಲಿ ಮೇಲ್ಕಂಡಂತೆ ಮಾಜಿ ಸೈನಿಕರಿಗೆ ಗರಿಷ್ಠ ವಯೋಮಿತಿಯನ್ನು ಸಡಿಲಿಸುವ ಅವಕಾಶವನ್ನು ಕಲ್ಪಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಇದರಿಂದಾಗಿ ಮಾಜಿ ಸೈನಿಕರು ನೇಮಕಾತಿಗೆ ಅರ್ಜಿ ಸಲ್ಲಿಸಲು ಸಾಧ್ಯವಾಗದೇ ಅವಕಾಶದಿಂದ ವಂಚಿತರಾದಂತಾಗುತ್ತದೆ.

ಆದುದರಿಂದ, ಮಾಜಿ ಸೈನಿಕರಿಗೆ ಗರಿಷ್ಠ ವಯೋಮಿತಿಯನ್ನು ಸಡಿಲಿಸುವ ಕುರಿತಂತೆ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 6(3)(ಸಿ)ರಡಿ ಕಲ್ಪಿಸಲಾಗಿರುವ ಆಸ್ಪದವನ್ನು ಎಲ್ಲಾ ಇಲಾಖೆಗಳು ಆಯಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ / ವಿಶೇಷ / ಇತರೆ ನಿಯಮಗಳಲ್ಲಿ ಹಾಗೂ ನೇಮಕಾತಿ ಅಧಿಸೂಚನೆಗಳಲ್ಲಿ ಕಡ್ಡಾಯವಾಗಿ ಅಳವಡಿಸಿಕೊಳ್ಳಲು ಕ್ರಮಕೈಗೊಳ್ಳುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗಾಯತ್ರಿ ಎಂ.ಆರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 500 ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಶುಕ್ರವಾರ, ಜುಲೈ ೦೮, ೨೦೧೬ (ಆಷಾಢ ೧೭, ಶಕ ವರ್ಷ ೧೯೩೮) | ನಂ. ೯೦೦ |
|---|---|---|
| *Part–I* | *Bengaluru, Friday, July 08, 2016 (Ashada 17 Shaka Varsha 1938)* | *No. 900* |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯವನ್ನೊಳಗೊಂಡಂತೆ ಸರ್ಕಾರದ ಎಲ್ಲಾ ಕ್ಷೇತ್ರ ಇಲಾಖೆಗಳು/ಶಾಸನಬದ್ಧ ಸಂಸ್ಥೆಗಳು/ವಿಭಾಗ/ಜಿಲ್ಲಾ ಮಟ್ಟದ ಕಚೇರಿಗಳಲ್ಲಿ ಸೃಜಿಸಲಾಗಿರುವ ಜಾಗೃತ ಕೋಶಗಳ (Vigilance Cells) ಮುಖ್ಯಸ್ಥರಾದ **ಮುಖ್ಯ ಜಾಗೃತ ಅಧಿಕಾರಿ** ಹಾಗು **ಜಾಗೃತ ಅಧಿಕಾರಿಗಳ** ಕರ್ತವ್ಯಗಳನ್ನು ನಿರ್ದಿಷ್ಟಪಡಿಸುವ ಕುರಿತು.

**ಓದಲಾಗಿದೆ:–**

1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 14 ಸೇಲೋಯ 2016, ದಿನಾಂಕ:14.03.2016.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 88 ಸೇಲೋಯ 2016, ದಿನಾಂಕ:22.06.2016.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:14.03.2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳ(Anti Corruption Bureau)ವನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:22.06.2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ, ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 14 ಸೇಲೋಯ 2016, ದಿನಾಂಕ:14.03.2016ರ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗು ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಸದರಿ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳ ನಂತರದ (officer next in seniority) ಅಧಿಕಾರಿಯನ್ನು ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer)ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಅದೇ ರೀತಿ ಸರ್ಕಾರದ ಎಲ್ಲಾ ಕ್ಷೇತ್ರ ಇಲಾಖೆಗಳು/ಶಾಸನಬದ್ಧ ಸಂಸ್ಥೆಗಳ ಕೇಂದ್ರಸ್ಥಾನದ ಕಚೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖಾ/ಶಾಸನಬದ್ಧ ಸಂಸ್ಥೆಗಳ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (officer next in seniority) ಮುಖ್ಯ ಜಾಗೃತ ಅಧಿಕಾರಿ(Chief Vigilance Officer)ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಹಾಗೂ ಸರ್ಕಾರದ ಎಲ್ಲಾ ಕ್ಷೇತ್ರ ಇಲಾಖೆಗಳು/ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಚೇರಿಗಳನ್ನು ಹೊಂದಿದ್ದು, ಸದರಿ ಕಚೇರಿಗಳಲ್ಲಿ ಗಣನೀಯ ಸಿಬ್ಬಂದಿ (reasonable strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಚೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ, ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಚೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (officer next in seniority) ಜಾಗೃತ ಅಧಿಕಾರಿ(Vigilance Officer)ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಜಾಗೃತ ಕೋಶಗಳ ಮುಖ್ಯಸ್ಥರಾಗಿರುವ ಮುಖ್ಯ ಜಾಗೃತ ಅಧಿಕಾರಿ ಹಾಗೂ ಜಾಗೃತ ಅಧಿಕಾರಿಗಳ ಕರ್ತವ್ಯಗಳನ್ನು ನಿರ್ದಿಷ್ಟಪಡಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 88 ಸೇಲೋಯು 2016 (ಭಾಗ–1), ಬೆಂಗಳೂರು, ದಿನಾಂಕ:06.07.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರದ ಸಚಿವಾಲಯವನ್ನೊಳಗೊಂಡಂತೆ ಸರ್ಕಾರದ ಎಲ್ಲಾ ಕ್ಷೇತ್ರ ಇಲಾಖೆಗಳು/ಶಾಸನಬದ್ಧ ಸಂಸ್ಥೆಗಳು/ವಿಭಾಗ/ಜಿಲ್ಲಾ ಮಟ್ಟದ ಕಚೇರಿಗಳಲ್ಲಿ ಸೃಜಿಸಲಾಗಿರುವ ಜಾಗೃತ ಕೋಶಗಳ (Vigilance Cells) ಮುಖ್ಯಸ್ಥರಾದ **ಮುಖ್ಯ ಜಾಗೃತ ಅಧಿಕಾರಿ** ಹಾಗು **ಜಾಗೃತ ಅಧಿಕಾರಿಗಳ** ಕರ್ತವ್ಯಗಳನ್ನು ಈ ಕೆಳಕಂಡಂತೆ ನಿರ್ದಿಷ್ಟಪಡಿಸಲಾಗಿದೆ:–

**(ಅ) ಮುಂಜಾಗ್ರತಾ ಕ್ರಮಗಳಿಗೆ** (Preventive Vigilance) **ಸಂಬಂಧಿಸಿದಂತೆ ಮುಖ್ಯ ಜಾಗೃತ ಅಧಿಕಾರಿ ಹಾಗು ಜಾಗೃತ ಅಧಿಕಾರಿಗಳ ಕರ್ತವ್ಯಗಳು:–**

(1) ಭ್ರಷ್ಟಾಚಾರ ಅಥವಾ ಅಕ್ರಮಗಳ ವ್ಯಾಪ್ತಿಯನ್ನು ತೊಡೆದುಹಾಕಲು ಅಥವಾ ಕಡಿಮೆ ಮಾಡುವ ದೃಷ್ಟಿಯಿಂದ, ಇಲಾಖೆಗಳು/ಸಂಸ್ಥೆಗಳಲ್ಲಿ ಅಸ್ತಿತ್ವದಲ್ಲಿರುವ ನಿಯಮಾವಳಿಗಳು ಹಾಗೂ ಕಾರ್ಯ ವಿಧಾನಗಳನ್ನು ವಿವರವಾಗಿ ಪರಿಶೀಲಿಸುವುದು.

(2) ವ್ಯವಸ್ಥೆಯ ವೈಫಲ್ಯಗಳು ಮತ್ತು ಭ್ರಷ್ಟಾಚಾರ ಅಥವಾ ಅಕ್ರಮಗಳ ಅಸ್ತಿತ್ವವನ್ನು ಪತ್ತೆ ಹಚ್ಚಲು ಅನಿರೀಕ್ಷಿತ ತಪಾಸಣೆ ಮತ್ತು ನಿಯಮಿತ ತಪಾಸಣೆಗಳನ್ನು ಕಾಲಕಾಲಕ್ಕೆ ಹೊರಡಿಸಲಾದ ಆಯಾ ಇಲಾಖೆಗಳ ಸುತ್ತೋಲೆಗಳನ್ವಯ ಸಂಬಂಧಪಟ್ಟ ಅಧಿಕಾರಿಗಳು ಅನುಷ್ಠಾನಗೊಳಿಸುವುದನ್ನು ಖಚಿತಪಡಿಸಿಕೊಂಡು ಈ ಬಗ್ಗೆ ಮಾಹಿತಿಯನ್ನು ಕ್ರೋಢೀಕರಿಸಿ, ಲಗತ್ತಿಸಿದ **ನಮೂನೆಯಲ್ಲಿನ ಪಟ್ಟಿ–1ರಲ್ಲಿ** ಸಲ್ಲಿಸುವುದು.

**(ಆ) ದಂಡನಾತ್ಮಕ ಕ್ರಮಗಳಿಗೆ** (Punitive Vigilance) **ಸಂಬಂಧಿಸಿದಂತೆ ಮುಖ್ಯ ಜಾಗೃತ ಅಧಿಕಾರಿ ಹಾಗು ಜಾಗೃತ ಅಧಿಕಾರಿಗಳ ಕರ್ತವ್ಯಗಳು:–**

(1) ಭ್ರಷ್ಟಾಚಾರ ನಿಗ್ರಹದಳ ಅಥವಾ ಇತರೆ ತನಿಖಾ ಸಂಸ್ಥೆಗಳು ಯಾವುದೇ ಅಧಿಕಾರಿಯ ಬಗ್ಗೆ ಮಾಹಿತಿ/ಅನುಮತಿ/ಅಭಿಪ್ರಾಯ/ಸ್ಪಷ್ಟೀಕರಣ/ದಾಖಲೆಗಳನ್ನು ಕೋರಿದಾಗ, 15 ದಿನಗಳೊಳಗೆ ಮಾಹಿತಿ ನೀಡಲು ಕ್ರಮ ಕೈಗೊಳ್ಳುವುದನ್ನು ಖಚಿತಪಡಿಸಿಕೊಳ್ಳುವುದು; ಒಂದು ವೇಳೆ ಮಾಹಿತಿಯನ್ನು 15 ದಿನಗಳೊಳಗೆ ನೀಡದಿದ್ದಲ್ಲಿ, ವಿಷಯವು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರು/ಕಾರ್ಯದರ್ಶಿಯ ಹಂತಕ್ಕೆ ವರ್ಗಾಯಿಸಲ್ಪಡುತ್ತದೆ ಹಾಗೂ ಒಟ್ಟಾರೆ 30 ದಿನಗಳೊಳಗಾಗಿ ಮಾಹಿತಿ ನೀಡುವುದು ಕಡ್ಡಾಯವಾಗಿರುತ್ತದೆ.

(2) ಭ್ರಷ್ಟಾಚಾರ ನಿಗ್ರಹದಳ ಅಥವಾ ಇತರೆ ತನಿಖಾ ಸಂಸ್ಥೆಗಳು ಅಭಿಯೋಜನಾ ಮಂಜೂರಾತಿ ಕೋರಿ ಸಲ್ಲಿಸುವ ಪ್ರಸ್ತಾವನೆಗಳನ್ನು ನಿಗದಿತ ಅವಧಿಯೊಳಗೆ ವಿಲೇಗೊಳಿಸಲು ಅಗತ್ಯ ಕ್ರಮ ಕೈಗೊಳ್ಳುವುದನ್ನು ಖಚಿತಪಡಿಸಿಕೊಳ್ಳುವುದು. ಹಾಗು ಈ ಸಂಬಂಧದ ಪ್ರಗತಿ ವರದಿಯನ್ನು ಲಗತ್ತಿಸಿದ **ನಮೂನೆಯಲ್ಲಿನ ಪಟ್ಟಿ–3ರಲ್ಲಿ** ಸಲ್ಲಿಸುವುದು.

(3) ಭ್ರಷ್ಟಾಚಾರ ನಿಗ್ರಹದಳ ಅಥವಾ ಇತರೆ ತನಿಖಾ ಸಂಸ್ಥೆಗಳು ಅಮಾನತ್ತು/ವರ್ಗಾವಣೆಗೆ ಶಿಫಾರಸ್ಸು ಮಾಡುವ ಪ್ರಕರಣಗಳಲ್ಲಿ ತುರ್ತು ಕ್ರಮ ಕೈಗೊಳ್ಳುವುದನ್ನು ಖಚಿತಪಡಿಸಿಕೊಳ್ಳುವುದು;

(4) ಮಾನ್ಯ ರಾಜ್ಯಪಾಲರು/ಮಾನ್ಯ ಮುಖ್ಯಮಂತ್ರಿಯವರ ಕಚೇರಿ/ಜನಸ್ಪಂದನ ವಿಭಾಗ/ ಸಾರ್ವಜನಿಕರಿಂದ ಸ್ವೀಕರಿಸಲಾದ/ಇಲಾಖೆಯಲ್ಲಿ ಸ್ವಯಂ ಪ್ರೇರಿತವಾಗಿ ದಾಖಲಿಸಲಾಗುವ ಜಾಗೃತ ವಿಷಯಗಳಿಗೆ ಸಂಬಂಧಿಸಿದ ದೂರುಗಳನ್ನು ಸ್ವೀಕರಿಸುವುದು. ಸದರಿ ದೂರುಗಳನ್ನು ಪರಿಶೀಲಿಸಿ, ದೂರುಗಳ ತೀವ್ರತೆಯನ್ನಾಧರಿಸಿ, ಭ್ರಷ್ಟಾಚಾರ ನಿಗ್ರಹದಳ ಅಥವಾ ಲೋಕಾಯುಕ್ತ ಸಂಸ್ಥೆ ಅಥವಾ ಇಲಾಖಾ ವಿಚಾರಣೆಗೆ ವಹಿಸುವ ಬಗ್ಗೆ ಅಥವಾ ಇನ್ನಾವುದೇ ಸೂಕ್ತ ಕ್ರಮವನ್ನು ಸಮುಚಿತ ಮಾರ್ಗದಲ್ಲಿ ತೆಗೆದುಕೊಳ್ಳುವಂತೆ ನೋಡಿಕೊಳ್ಳುವುದು. ಹಾಗು ಈ ವಿಚಾರದಲ್ಲಿ ಸಂದೇಹವಿದ್ದಲ್ಲಿ ವಿಷಯವನ್ನು ಸಂಬಂಧಪಟ್ಟ ಆಡಳಿತ ಮುಖ್ಯಸ್ಥರಿಗೆ ಸಲ್ಲಿಸುವುದು. ಸದರಿ ಪ್ರಕರಣಗಳ ಪ್ರಗತಿಯನ್ನು ಆಗಿಂದ್ದಾಗ್ಗೆ ಗಮನಿಸಿ ಲಗತ್ತಿಸಿದ **ನಮೂನೆಯಲ್ಲಿನ ಪಟ್ಟಿ–2ರಲ್ಲಿ** ಸಲ್ಲಿಸುವುದು. ಅಲ್ಲದೇ, ಸಾಮಾನ್ಯವಾಗಿ ಕೆಳಕಂಡ ರೀತಿಯ ಪ್ರಕರಣಗಳನ್ನು ಭ್ರಷ್ಟಾಚಾರ ನಿಗ್ರಹ ದಳಕ್ಕೆ ತನಿಖೆಗಾಗಿ ವಹಿಸಲು ಕ್ರಮ ಕೈಗೊಳ್ಳುವುದನ್ನು ಖಚಿತಪಡಿಸಿಕೊಳ್ಳುವುದು;

(i) ಲಂಚ, ಭ್ರಷ್ಟಾಚಾರ, ಫೋರ್ಜರಿ, ವಂಚನೆ, ವಿಶ್ವಾಸ ವಂಚನೆ (criminal breach of trust) ಖೊಟ್ಟಿ ದಾಖಲಾತಿ ಇತ್ಯಾದಿ ಆರೋಪಗಳಿಗೆ ಸಂಬಂಧಿಸಿದ ದೂರುಗಳು;

(ii) ಅಕ್ರಮ ಆಸ್ತಿ ಪ್ರಕರಣಗಳಿಗೆ ಸಂಬಂಧಿಸಿದ ದೂರುಗಳು;

(iii) ತಜ್ಞ ಪೊಲೀಸ್ ತನಿಖೆಯ ಅವಶ್ಯಕತೆ ಇರುವ ಸಂಕೀರ್ಣ ಸ್ವರೂಪದ ಪ್ರಕರಣಗಳು;

(5) ಇಲಾಖಾ ವಿಚಾರಣಾ ಪ್ರಕರಣಗಳಲ್ಲಿ ವಿಚಾರಣಾಧಿಕಾರಿ ಹಾಗು ಮಂಡನಾಧಿಕಾರಿಗಳನ್ನು ಆಯಾ ಶಿಸ್ತು ಪ್ರಾಧಿಕಾರಿಗಳು ನೇಮಿಸುವಲ್ಲಿ ಯಾವುದೇ ವಿಳಂಬ ಆಗದಿರುವುದನ್ನು ಖಚಿತಪಡಿಸಿಕೊಳ್ಳುವುದು; ಹಾಗೂ ವಿಚಾರಣಾಧಿಕಾರಿಗಳ ವಿಚಾರಣಾ ವರದಿಗಳ ಮೇಲೆ ಶಿಸ್ತು ಪ್ರಾಧಿಕಾರಿಗಳು ಅಂತಿಮ ಆದೇಶಗಳನ್ನು ಸೂಕ್ತವಾದ ರೀತಿಯಲ್ಲಿ ಹಾಗು ಸಕಾಲದಲ್ಲಿ ಹೊರಡಿಸುವುದನ್ನು ಖಚಿತಪಡಿಸಿಕೊಳ್ಳುವುದು; ಇಲಾಖಾ ವಿಚಾರಣಾ ಪ್ರಕರಣಗಳ ಪ್ರಗತಿಯನ್ನು ಆಗ್ಗಿಂದ್ದಾಗ್ಗೆ ಗಮನಿಸಿ (monitor), ಈ ಬಗ್ಗೆ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಮಾಹಿತಿ ಪಡೆದು ಲಗತ್ತಿಸಿದ **ನಮೂನೆಯಲ್ಲಿನ ಪಟ್ಟಿ–4ರಲ್ಲಿ** ಸಲ್ಲಿಸುವುದು. ಹಾಗೂ ಇಲಾಖಾ ವಿಚಾರಣಾ ಪ್ರಕರಣಗಳಲ್ಲಿ ಅನಗತ್ಯ ವಿಳಂಬವಾಗುತ್ತಿದ್ದಲ್ಲಿ, ಇದನ್ನು ಮೇಲಾಧಿಕಾರಿಗಳ ಗಮನಕ್ಕೆ ತಂದು, ಸದರಿ ಪ್ರಕರಣಗಳನ್ನು ಸಕಾಲದಲ್ಲಿ ಪೂರ್ಣಗೊಳಿಸಲು ಅಗತ್ಯ ಕ್ರಮಕೈಗೊಳ್ಳುವುದು.

ಸರ್ಕಾರದ ಎಲ್ಲಾ ಕ್ಷೇತ್ರ ಇಲಾಖೆ/ಶಾಸನಬದ್ಧ ಸಂಸ್ಥೆಗಳ **ಮುಖ್ಯ ಜಾಗೃತ ಅಧಿಕಾರಿಗಳು** ತಮ್ಮ ಅಧೀನ ಕಚೇರಿಗಳ **ಜಾಗೃತ ಅಧಿಕಾರಿಗಳಿಂದ** ದೂರುಗಳು/ಜಾಗೃತ ಪ್ರಕರಣಗಳ ವಿಲೇ ಹಾಗೂ ಬಾಕಿ ಪ್ರಕರಣಗಳ ಅಂಕಿ ಅಂಶಗಳ ವರದಿಯನ್ನು ಈ ಆದೇಶಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ತ್ರೈಮಾಸಿಕವಾಗಿ ಪಡೆಯತಕ್ಕದ್ದು. ಹಾಗೂ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳ **ಮುಖ್ಯ ಜಾಗೃತ ಅಧಿಕಾರಿಗಳು** ತಮ್ಮ ಆಡಳಿತ ವ್ಯಾಪ್ತಿಗೊಳಪಡುವ ಎಲ್ಲಾ ಕ್ಷೇತ್ರ ಇಲಾಖೆಗಳ **ಮುಖ್ಯ ಜಾಗೃತ ಅಧಿಕಾರಿಗಳಿಂದ** ಲಗತ್ತಿಸಿರುವ ನಮೂನೆಯಲ್ಲಿ ಮಾಹಿತಿಯನ್ನು ಪಡೆದು ಕ್ರೋಢೀಕರಿಸಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜಾಗೃತ ವಿಭಾಗಕ್ಕೆ **ತ್ರೈಮಾಸಿಕ** ವರದಿಯನ್ನು ಕಳುಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಉಮಾ. ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಜಾಗೃತ ವಿಭಾಗ).

## ಮುಖ್ಯ ಜಾಗೃತಾ ಅಧಿಕಾರಿಗಳು ಹಾಗೂ ಜಾಗೃತ ಅಧಿಕಾರಿಗಳು ಸಲ್ಲಿಸಬೇಕಾದ ತ್ರೈಮಾಸಿಕ ವರದಿ

## ಪ್ರಪತ್ರ

**ಅ. ಮುಂಜಾಗ್ರತಾ ಕ್ರಮಗಳು** (Preventive Vigilance)

1. **ಮುಖ್ಯ ಜಾಗೃತ ಅಧಿಕಾರಿ/ಜಾಗೃತ ಅಧಿಕಾರಿಗಳು ಕಳುಹಿಸಬೇಕಾದ ತನಿಖೆ/ತಪಾಸಣೆಗಳ ವಿವರ**

| ತನಿಖೆಯ ರೀತಿ | ಕಳೆದ ತ್ರೈಮಾಸಿಕದ ಅಂತ್ಯಕ್ಕೆ ಮಾಡಿದ ತನಿಖೆಗಳು | ಪ್ರಸ್ತುತ ತ್ರೈಮಾಸಿಕದಲ್ಲಿ ಮಾಡಿದ ತನಿಖೆಗಳು | ಷರಾ |
|---|---|---|---|
| ಕಾಲಕಾಲಕ್ಕೆ | | | |
| ಅನಿರೀಕ್ಷಿತ ತಪಾಸಣೆಗಳು | | | |
| ಮೇಜರ್ ವರ್ಕ್ಸ್ | | | |
| **ಒಟ್ಟು** | | | |

(ಆ) **ದಂಡನಾತ್ಮಕ ಕ್ರಮಗಳು** (Punitive Vigilance)

2. **ಸ್ವೀಕರಿಸಿದ ದೂರುಗಳು**

| ಸ್ವೀಕರಿಸಿದ ಮೂಲ | ಆರಂಭಿಕ ಬಾಕಿ | ಪ್ರಸ್ತುತ ಅವಧಿಯಲ್ಲಿ ಸ್ವೀಕರಿಸಿದ ದೂರುಗಳು | ಒಟ್ಟು | ಪ್ರಸ್ತುತ ಅವಧಿಯಲ್ಲಿ ವಿಲೇ ಮಾಡಿದ ದೂರುಗಳು | ಬಾಕಿಯಿರುವ ದೂರುಗಳು | ಬಾಕಿ ದೂರುಗಳು | | |
|---|---|---|---|---|---|---|---|---|
| | | | | | | 1ರಿಂದ 6 ತಿಂಗಳು | 6ರಿಂದ 12 ತಿಂಗಳು | 12 ತಿಂಗಳಿಗಿಂತ ಮೇಲ್ಪಟ್ಟು |
| (1) | (2) | (3) | (4) (2+3=4) | (5) | (6) (4-5=6) | (7) | (8) | (9) |
| ಮಾನ್ಯ ರಾಜ್ಯಪಾಲರ ಕಚೇರಿ | | | | | | | | |
| ಮಾನ್ಯ ಮುಖ್ಯ ಮಂತ್ರಿಯವರ ಕಚೇರಿ | | | | | | | | |
| ಜನಸ್ಪಂದನ ವಿಭಾಗ | | | | | | | | |
| ಸ್ವಯಂ ಪ್ರೇರಿತ | | | | | | | | |
| ಇತರೆ | | | | | | | | |
| **ಒಟ್ಟು** | | | | | | | | |

3. **ಅಭಿಯೋಜನಾ ಮಂಜೂರಾತಿಗಳು**

| ಆರಂಭಿಕ ಬಾಕಿ | ಪ್ರಸ್ತುತ ಅವಧಿಯಲ್ಲಿ ಸ್ವೀಕರಿಸಿದವು | ಒಟ್ಟು | ಪ್ರಸ್ತುತ ಅವಧಿಯಲ್ಲಿ ವಿಲೇ ಮಾಡಿದವು | | | ಬಾಕಿಯಿರುವ ಪ್ರಸ್ತಾವನೆಗಳು | ಬಾಕಿ ಪ್ರಕರಣಗಳು | | |
|---|---|---|---|---|---|---|---|---|---|
| | | | ಮಂಜೂರಾತಿ ನೀಡಿದ ಪ್ರಕರಣಗಳು | ತಿರಸ್ಕರಿಸಿದ ಪ್ರಕರಣಗಳು | ಒಟ್ಟು | | 1ರಿಂದ 6 ತಿಂಗಳು | 6ರಿಂದ 12 ತಿಂಗಳು | 12 ತಿಂಗಳಗಿಂತ ಮೇಲ್ಪಟ್ಟು |
| (1) | (2) | (3) | (4) | (5) | (6) (4+5=6) | (7) (3-6=7) | (8) | (9) | (10) |
| | | | | | | | | | |

4. **<u>ಇಲಾಖಾ ವಿಚಾರಣೆಗಳು</u>**

**(ಅ) ಲೋಕಾಯುಕ್ತಕ್ಕೆ ವಹಿಸಿದ ಪ್ರಕರಣಗಳು**

| ಆರಂಭಿಕ ಬಾಕಿ | ಪ್ರಸ್ತುತ ಅವಧಿ ಯಲ್ಲಿ ವಹಿಸಿದ ಪ್ರಕರಣ ಗಳು | ಒಟ್ಟು ಪ್ರಕರಣ ಗಳು | ಪ್ರಸ್ತುತ ಅವಧಿಯಲ್ಲಿ ಲೋಕಾಯುಕ್ತ ದಿಂದ ಅಂತಿಮ ವರದಿ ಸ್ವೀಕೃತವಾದ ಪ್ರಕರಣಗಳು | ಪ್ರಸ್ತುತ ಅವಧಿಯಲ್ಲಿ ಶಿಸ್ತು ಪ್ರಾಧಿಕಾರ ದಿಂದ ಅಂತಿಮ ಆದೇಶ ಹೊರಡಿಸಿದ ಪ್ರಕರಣಗಳು | ಬಾಕಿಯಿರುವ ಪ್ರಕರಣಗಳು | ಬಾಕಿ ಪ್ರಕರಣಗಳು | | |
|---|---|---|---|---|---|---|---|---|
| (1) | (2) | (3) | (4) | (5) | (6) (3-5=6) | (7) | (8) | (9) |
| | | | | | | 1ರಿಂದ 6 ತಿಂಗಳು | 6ರಿಂದ 12 ತಿಂಗಳು | 12 ತಿಂಗಳಗಿಂತ ಮೇಲ್ಪಟ್ಟು |
| | | | | | | | | |

**(ಆ) ಆಂತರಿಕವಾಗಿ ಇಲಾಖಾ ವಿಚಾರಣೆಗೆ ವಹಿಸಿದ ಪ್ರಕರಣಗಳ ವಿವರ**

| ಆರಂಭಿಕ ಬಾಕಿ | ಪ್ರಸ್ತುತ ಅವಧಿಯಲ್ಲಿ ಇಲಾಖಾ ವಿಚಾರಣೆಗೆ ವಹಿಸಿದ ಪ್ರಕರಣ ಗಳು | ಒಟ್ಟು ಪ್ರಕರಣ ಗಳು | ಪ್ರಸ್ತುತ ಅವಧಿಯಲ್ಲಿ ವಿಚಾರಣಾಧಿ ಕಾರಿಯಿಂದ ಅಂತಿಮ ವರದಿ ಸ್ವೀಕೃತವಾದ ಪ್ರಕರಣಗಳು | ಪ್ರಸ್ತುತ ಅವಧಿಯಲ್ಲಿ ಶಿಸ್ತು ಪ್ರಾಧಿಕಾರ ದಿಂದ ಅಂತಿಮ ಆದೇಶ ಹೊರಡಿಸಿದ ಪ್ರಕರಣಗಳು | ಬಾಕಿಯಿರುವ ಪ್ರಕರಣ ಗಳು | ಬಾಕಿ ಪ್ರಕರಣಗಳು | | |
|---|---|---|---|---|---|---|---|---|
| (1) | (2) | (3) | (4) | (5) | (6) (3-5=6) | (7) | (8) | (9) |
| | | | | | | 1ರಿಂದ 6 ತಿಂಗಳು | 6ರಿಂದ 12 ತಿಂಗಳು | 12 ತಿಂಗಳಿಗಿಂತ ಮೇಲ್ಪಟ್ಟು |
| | | | | | | | | |

ಸ್ಥಳ: ಮುಖ್ಯ ಜಾಗೃತಾ ಅಧಿಕಾರಿ/ಜಾಗೃತ ಅಧಿಕಾರಿ ಸಹಿ

ದಿನಾಂಕ: ಹೆಸರು

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 500 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–*I* | ಬೆಂಗಳೂರು, ಶುಕ್ರವಾರ, ಜುಲೈ ೧೫, ೨೦೧೬ (ಆಷಾಢ ೨೪, ಶಕ ವರ್ಷ ೧೯೩೮) | ನಂ. ೯೧೯ |
|---|---|---|
| ***Part–I*** | ***Bengaluru, Friday, July 15, 2016 (Ashada 24 Shaka Varsha 1938)*** | ***No. 919*** |


**ಕಾರ್ಮಿಕ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯೊಂದಿಗೆ ಹೊಂದಾಣಿಕೆ ಮಾಡಿಕೊಂಡ ಖಾಸಗಿ ಆಸ್ಪತ್ರೆಗಳ ತಲಾನುದಾನದ ಬಿಲ್ಲುಗಳನ್ನು ಪರಿಶೀಲಿಸಲು ಒಂದು ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕಾ.ರಾ.ವಿ.ಯೋ.ಸೇವೆಗಳು, ಬೆಂಗಳೂರು ಪತ್ರ ಸಂಖ್ಯೆ: Capt/12/2016–17, ದಿನಾಂಕ: 27–06–20164

**ಪ್ರಸ್ತಾವನೆ:–**

ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳ ಇಲಾಖೆಯು ಖಾಸಗಿ ಆಸ್ಪತ್ರೆಗಳೊಂದಿಗೆ ಒಡಂಬಡಿಕೆ ಮಾಡಿಕೊಂಡಿರುವ ಹಿನ್ನಲೆಯಲ್ಲಿ ಖಾಸಗಿ ಆಸ್ಪತ್ರೆಗಳು ವಿಮಾದಾರರು ಮತ್ತು ಅವರ ಕುಟುಂಬದವರಿಗೆ ಚಿಕಿತ್ಸಾ ಸೌಲಭ್ಯ ನೀಡಿದ ವೆಚ್ಚವನ್ನು ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳ ಇಲಾಖೆಯು ಭರಿಸಬೇಕಾಗಿರುತ್ತದೆ. ಅಂತಹ ಬಿಲ್ಲುಗಳಲ್ಲಿ ಒಂದು ವರ್ಷಕ್ಕೂ ಮೀರಿದ ಅವಧಿಯ ಬಿಲ್ಲುಗಳನ್ನು ಪರಿಶೀಲಿಸಿ, ಕಾಲ ವಿಳಂಬ ವಿನಾಯಿತಿ ನೀಡಬೇಕಾಗಿರುವುದರಿಂದ ಒಂದು ಸಮಿತಿಯನ್ನು ರಚಿಸಲು ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 223 ಎಲ್‌ಎಸ್‌ಐ 2016, ಬೆಂಗಳೂರು, ದಿನಾಂಕ: 14–7–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯು ಹೊಂದಾಣಿಕೆ ಮಾಡಿಕೊಂಡ ಖಾಸಗಿ ಆಸ್ಪತ್ರೆಗಳ ಸಾಮಾನ್ಯ ಚಿಕಿತ್ಸೆಯ ತಲಾನುದಾನದ ಬಿಲ್ಲುಗಳು ಒಂದು ವರ್ಷಕ್ಕೂ ಮೀರಿ ಬಾಕಿ ಇದ್ದು, ಈ ಬಿಲ್ಲುಗಳನ್ನು ಪರಿಶೀಲಿಸಿ, ಕಾಲ ವಿಳಂಬ ವಿನಾಯಿತಿ ನೀಡಬೇಕಾಗಿರುವುದರಿಂದ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| ಕ್ರ. ಸಂ. | ಸದಸ್ಯರ ವಿವರ |
|---|---|
| 1 | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಪ್ರತಿನಿಧಿ |
| 2 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರ ಪ್ರತಿನಿಧಿ |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಪ್ರತಿನಿಧಿ |
| 4 | ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ಬೆಂಗಳೂರು |
| 5 | ಉಪಕಾರ್ಯದರ್ಶಿ–2, ಕಾರ್ಮಿಕ ಇಲಾಖೆ, ಬೆಂಗಳೂರು |
| 6 | ಉಪ ನಿರ್ದೇಶಕರು(ಕಾರ್ಯಕ್ರಮ), ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು, ಬೆಂಗಳೂರು |

ಸಮಿತಿಯು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಕ್ಷ್ಮೀದೇವಿ**
ಪೀಠಾಧಿಕಾರಿ
ಕಾರ್ಮಿಕ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–*I* | ಬೆಂಗಳೂರು, ಸೋಮವಾರ, ಜುಲೈ ೧೮, ೨೦೧೬ (ಆಷಾಢ ೨೭, ಶಕ ವರ್ಷ ೧೯೩೮) | ನಂ. ೯೩೦ |
|---|---|---|
| ***Part–I*** | ***Bengaluru, Monday, July 18, 2016 (Ashada 27 Shaka Varsha 1938)*** | ***No. 930*** |


**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**
**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಅರಣ್ಯ ಇಲಾಖೆಯಲ್ಲಿ ಅರಣ್ಯ ಉತ್ಪನ್ನಗಳನ್ನು ಇ–ಹರಾಜು / ಇ–ಟೆಂಡರ್ ಮೂಲಕ ವಿಲೇ ಮಾಡುವ ವ್ಯವಸ್ಥೆಯನ್ನು ಅನುಷ್ಠಾನಗೊಳಿಸುವ ಬಗ್ಗೆ ಮತ್ತು ಈ ಕಾರ್ಯವನ್ನು Rashtriya E-Market Service Private Limited ಗೆ ವಹಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ: 25.06.2016ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.

**ಪ್ರಸ್ತಾವನೆ:**

ಅರಣ್ಯ ಇಲಾಖೆಯಲ್ಲಿ ಅರಣ್ಯ ಉತ್ಪನ್ನಗಳನ್ನು ಸರ್ಕಾರಿ ಮರಮುಟ್ಟು ಸಂಗ್ರಹಾಲಯಗಳಲ್ಲಿ Online ಮೂಲಕ ವಿಲೇವಾರಿ ಮಾಡುವ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರೂ ಸಹ ದರ ನಿಗಧಿಯ ಘಟ್ಟದಲ್ಲಿ ಸಾಂಪ್ರದಾಯಿಕ ವ್ಯವಸ್ಥೆಯಲ್ಲೇ ಹರಾಜು ನಡೆಸಲಾಗುತ್ತಿದೆ. ಆದ್ದರಿಂದ ಈ ವ್ಯವಸ್ಥೆಯನ್ನು ಹೆಚ್ಚು ಪಾರದರ್ಶಕವಾಗಿಸಲು, ಹರಾಜು ಪ್ರಕ್ರಿಯೆಗೆ ಹೆಚ್ಚಿನ ವಿಶ್ವಾಸಾರ್ಹತೆ ಒದಗಿಸಲು ಹಾಗೂ ಇಲಾಖೆಗೆ ಹೆಚ್ಚಿನ ಆದಾಯ ತರುವ ದೃಷ್ಠಿಯಿಂದ ಇ–ಹರಾಜು / ಇ–ಟೆಂಡರ್ ಪ್ರಕ್ರಿಯೆ ಜಾರಿಗೆ ಬರುವುದು ಅಗತ್ಯವಾಗಿದೆ.

ರಾಜ್ಯದಲ್ಲಿ ವ್ಯವಸಾಯೋತ್ಪನ್ನಗಳ ಮಾರುಕಟ್ಟೆ ಇಲಾಖೆಯ ವ್ಯಾಪ್ತಿಯಲ್ಲಿನ ವ್ಯವಸಾಯೋತ್ಪನ್ನ ಮಾರುಕಟ್ಟೆಗಳಲ್ಲಿ ವ್ಯವಸಾಯ ಉತ್ಪನ್ನಗಳ ಮಾರಾಟದಲ್ಲಿ ReMS ಇ–ಹರಾಜು/ಇ–ಟೆಂಡರ್ ಪ್ರಕ್ರಿಯೆಯನ್ನು ದೊಡ್ಡ ಪ್ರಮಾಣದಲ್ಲಿ ಅನುಷ್ಠಾನಗೊಳಿಸಿದ್ದು, ಅದು ಬಹುತೇಕ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಅರಣ್ಯ ಇಲಾಖೆಯಲ್ಲಿ ಅರಣ್ಯ ಉತ್ಪನ್ನಗಳ ವಿಲೇವಾರಿಯಲ್ಲಿ ಇ–ಹರಾಜು/ಇ–ಟೆಂಡರ್ ವ್ಯವಸ್ಥೆಯನ್ನು ಅಳವಡಿಸಿಕೊಳ್ಳ ಬಹುದಾಗಿದೆ. ReMS ಸರ್ಕಾರಿ ಸಂಸ್ಥೆಯಾಗಿರುವುದರಿಂದ ಅರಣ್ಯ ಇಲಾಖೆಯಲ್ಲಿ ಅರಣ್ಯ ಉತ್ಪನ್ನಗಳ ಇ–ಹರಾಜು / ಇ–ಟೆಂಡರ್ ವ್ಯವಸ್ಥೆಯ ಅನುಷ್ಠಾನ ಮತ್ತು ನಿರ್ವಹಣೆಯನ್ನು ಸದರಿ ಸಂಸ್ಥೆಗೆ ವಹಿಸಬಹುದಾಗಿದೆ ಎಂದು ದಿನಾಂಕ:25.06.2016ರ ಸಭೆಯಲ್ಲಿ ತೀರ್ಮಾನಿಸಲಾಯಿತು.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 59 ಎಫ್‌ಡಿಪಿ 2016 ದಿನಾಂಕ: 16.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅರಣ್ಯ ಇಲಾಖೆಯಲ್ಲಿ ಅರಣ್ಯ ಉತ್ಪನ್ನಗಳನ್ನು ಇ–ಹರಾಜು / ಇ–ಟೆಂಡರ್ ಮೂಲಕ ವಿಲೇ ಮಾಡುವ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿ

ನೀಡಲಾಗಿದೆ. ಇದಕ್ಕೆ ಪೂರಕವಾಗಿ ಈ ಕೆಳಕಂಡ ಮುಂದಿನ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸಹ ಮಂಜೂರಾತಿ ನೀಡಲಾಗಿದೆ:–

1. ಅರಣ್ಯ ಇಲಾಖೆಯಲ್ಲಿ ಅರಣ್ಯ ಉತ್ಪನ್ನಗಳನ್ನು ಇ–ಹರಾಜು / ಇ–ಟೆಂಡರ್ ಮೂಲಕ ವಿಲೇ ಮಾಡುವ ವ್ಯವಸ್ಥೆಯನ್ನು ಅನುಷ್ಠಾನ ಮಾಡುವ ಮತ್ತು ನಿರ್ವಹಿಸುವ ಕಾರ್ಯವನ್ನು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ನಿರ್ವಹಿಸುವ ಮಾದರಿಯಲ್ಲಿ ಸೂಕ್ತ ಮಾರ್ಪಾಡುಗಳೊಂದಿಗೆ ನಿರ್ವಹಿಸಲು Rashtriya E-Market Service Private Limited ಗೆ ವಹಿಸಿದೆ.

2. ದಾಂಡೇಲಿಯಲ್ಲಿ ಅರಣ್ಯ ಉತ್ಪನ್ನಗಳ ಇ–ಹರಾಜು / ಇ–ಟೆಂಡರ್ ವ್ಯವಸ್ಥೆಯನ್ನು Pilot Basis ಮೇಲೆ ತ್ವರಿತವಾಗಿ ಅನುಷ್ಠಾನಗೊಳಿಸಕ್ಕದ್ದು.

3. ನಂತರದಲ್ಲಿ, 1ನೇ ತಾರೀಖು ಸೆಪ್ಟೆಂಬರ್ 2016ರಿಂದ ಜಾರಿಗೆ ಬರುವಂತೆ ಈ ವ್ಯವಸ್ಥೆಯನ್ನು ಅರಣ್ಯ ಇಲಾಖೆಯ ಎಲ್ಲಾ ಟಿಂಬರ್ ಯಾರ್ಡ್‌ಗಳಲ್ಲಿ ಜಾರಿಗೊಳಿಸತಕ್ಕದ್ದು.

4. ಇ–ಹರಾಜು / ಇ–ಟೆಂಡರ್ ಪ್ರಕ್ರಿಯೆಯನ್ನು ಸಂಬಂಧಪಟ್ಟ ಜಿಲ್ಲೆಗಳ / ಕೇಂದ್ರ ಸ್ಥಾನಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಯಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಸದರಿ ಕಛೇರಿಗಳಲ್ಲಿ ಅಗತ್ಯವಿರುವ ಸಂಖ್ಯೆಯಲ್ಲಿ ಕಂಪ್ಯೂಟರ್‌ಗಳನ್ನು ಹಾಗೂ ಅಗತ್ಯವಿರುವ logistic ಸೌಲಭ್ಯಗಳನ್ನು ಇಲಾಖೆಯು ಒದಗಿಸತಕ್ಕದ್ದು. ಅಂತಹ ಪ್ರತಿ ಕೇಂದ್ರದಲ್ಲಿ ಈ ವ್ಯವಸ್ಥೆಯನ್ನು ಸಮರ್ಪಕವಾಗಿ ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು 2–3 ಜನ ಅಧಿಕಾರಿ/ ಸಿಬ್ಬಂದಿಗೆ ಅಗತ್ಯ ತರಬೇತಿಯನ್ನು ReMS ಸಂಸ್ಥೆಯು ನೀಡತಕ್ಕದ್ದು.

5. ReMS ವ್ಯವಸ್ಥಾಪಕ ನಿರ್ದೇಶಕರು ಮತ್ತು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಐ.ಸಿ.ಟಿ. ವಿಭಾಗ ಇವರು ಈ ವ್ಯವಸ್ಥೆಯನ್ನು ಕಾರ್ಯಗತಗೊಳಿಸಲು ಅಗತ್ಯ ಸಮಾಲೋಚನೆ ಮತ್ತು ಸಮನ್ವಯ ಮಾಡಿ ಕಾಲಬದ್ಧವಾಗಿ ಈ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್.ಭಾಗ್ಯಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–*I* | ಬೆಂಗಳೂರು, ಸೋಮವಾರ, ಜುಲೈ ೧೮, ೨೦೧೬ (ಆಷಾಢ ೨೭, ಶಕ ವರ್ಷ ೧೯೩೮) | ನಂ. ೯೩೨ |
|---|---|---|
| ***Part–I*** | ***Bengaluru, Monday, July 18, 2016 (Ashada 27 Shaka Varsha 1938)*** | ***No. 932*** |

**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ರಾಜ್ಯ ಸಚಿವರ ಸ್ಥಾನಮಾನ ಹೊಂದಿರುವ ಮಾನ್ಯ ಸಂಸದೀಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ ಮತ್ತು ಸಿಬ್ಬಂದಿ ಹುದ್ದೆಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 17 ಸಂವ್ಯವಿ 2015, ದಿನಾಂಕ: 05.11.2015, 07.11.2015 ಮತ್ತು 23.11.2015.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅಧಿಸೂಚನೆಗಳಲ್ಲಿ Karnataka Parliamentary Secretaries Salary, Allowances and Miscellaneous Provisions Act, 1963ರ ಪ್ರಕರಣ 2ರ ಖಂಡ (ಎ) ರನ್ವಯ ಮಾನ್ಯ ಮುಖ್ಯಮಂತ್ರಿಯವರು ಮತ್ತು ಇತರ ಸಚಿವರ ಸಂಸದೀಯ ಕಾರ್ಯದರ್ಶಿಯವರನ್ನು ನೇಮಿಸಲಾಗಿರುತ್ತದೆ. ಸದರಿ ಸಂಸದೀಯ ಕಾರ್ಯದರ್ಶಿಗಳಿಗೆ ರಾಜ್ಯ ಸಚಿವರ ಸ್ಥಾನಮಾನ ನೀಡಲಾಗಿದೆ.

ಸಂಸದೀಯ ಕಾರ್ಯದರ್ಶಿಗಳಿಗೆ ಆಪ್ತ ಕಾರ್ಯದರ್ಶಿ ಮತ್ತು ಆಪ್ತ ಸಿಬ್ಬಂದಿಯ ವರ್ಗ ಮತ್ತು ಹುದ್ದೆಗಳನ್ನು ನಿಗದಿಪಡಿಸಬೇಕಾಗಿದ್ದು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 17 ಸಂವ್ಯವಿ 2015, ದಿನಾಂಕ: 18.07.2016**

ರಾಜ್ಯ ಸಚಿವರ ಸ್ಥಾನಮಾನ ಹೊಂದಿರುವ ಮಾನ್ಯ ಸಂಸದೀಯ ಕಾರ್ಯದರ್ಶಿಗಳ ಆಪ್ತ ಸಿಬ್ಬಂದಿ ಶಾಖೆಗೆ ಈ ಕೆಳಕಂಡ ಹುದ್ದೆಗಳನ್ನು ನಿಗದಿಪಡಿಸಲಾಗಿದೆ.

ಸದರಿ Staff Pattern ಅನ್ವಯ ಎಲ್ಲಾ ಸಂಸದೀಯ ಕಾರ್ಯದರ್ಶಿಗಳ ಆಪ್ತ ಶಾಖೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಈ ಕೆಳಕಂಡ ಹುದ್ದೆಗಳನ್ನು ಸಂಸದೀಯ ಕಾರ್ಯದರ್ಶಿಗಳ ಪದಾವಧಿಯವರೆಗೆ ಅಥವಾ ನೌಕರರ ಸೇವೆಯು ಸಂಸದೀಯ ಕಾರ್ಯದರ್ಶಿಗಳಿಗೆ ಅವಶ್ಯಕವಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಎಂಬ ಷರತ್ತನ್ನು ವಿಧಿಸಿ ಈ ಕೆಳಗಿನಂತೆ ಭರ್ತಿ ಮಾಡಲು ಆರ್ಥಿಕ ಇಲಾಖೆಯು ಸಹಮತಿಸಿದೆ. ಈ ಹಿನ್ನೆಲೆಯಲ್ಲಿ ಸದರಿ ಸಂಸದೀಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ಅಧಿಕಾರಿ ಮತ್ತು ಇತರ ನೌಕರರನ್ನು ನೇಮಿಸಿಕೊಳ್ಳಲು ಮಾನ್ಯ ಸಂಸದೀಯ ಕಾರ್ಯದರ್ಶಿಗಳ ಸಂಬಂಧಪಟ್ಟ ಆಯಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು/ಸರ್ಕಾರದ ಕಾರ್ಯದರ್ಶಿಗಳು ಸದರಿ ಇಲಾಖೆಗಳಿಗೆ ಒದಗಿಸಲಾದ ಲೆಕ್ಕ ಶೀರ್ಷಿಕೆಗಳಡಿಯಲ್ಲಿಯೇ ಸದರಿ ಆಪ್ತ ಕಾರ್ಯದರ್ಶಿ ಮತ್ತು ಆಪ್ತ ಸಿಬ್ಬಂದಿಗಳನ್ನು ನೇಮಿಸುವ ಹಾಗೂ ಅವರುಗಳಿಗೆ ತಗಲುವ ವೇತನ ಮತ್ತು ಇತರ ಸವಲತ್ತುಗಳ ವೆಚ್ಚವನ್ನು ಭರಿಸಲು ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ರಾಜ್ಯ ಸಚಿವರ ಸ್ಥಾನಮಾನ ಹೊಂದಿರುವ ಸಂಸದೀಯ ಕಾರ್ಯದರ್ಶಿಗಳ ಆಪ್ತ ಸಿಬ್ಬಂದಿ ಹುದ್ದೆಗಳ ವಿವರ | | |
|---|---|---|---|
| 1. | ಆಪ್ತ ಕಾರ್ಯದರ್ಶಿ | 1 ಹುದ್ದೆ | ನಿಯೋಜನೆ |
| 2. | ಆಪ್ತ ಸಹಾಯಕರು | 2 ಹುದ್ದೆಗಳು | ನಿಯೋಜನೆ/ಗುತ್ತಿಗೆ |
| 3. | ಕನ್ನಡ ಬೆರಳಚ್ಚುಗಾರರು | 1 ಹುದ್ದೆ | ನಿಯೋಜನೆ/ಗುತ್ತಿಗೆ |
| 4. | ವಾಹನ ಚಾಲಕರು | 1 ಹುದ್ದೆ | ಹೊರಗುತ್ತಿಗೆ |
| 5. | 'ಡಿ' ವರ್ಗ | 2 ಹುದ್ದೆಗಳು | ಹೊರಗುತ್ತಿಗೆ |

ಕಾಲಕಾಲಕ್ಕೆ ಮುಂದೆಯೂ ರಾಜ್ಯ ಸಚಿವರ ಸ್ಥಾನಮಾನ ಹೊಂದಿದ ಮಾನ್ಯ ಸಂಸದೀಯ ಕಾರ್ಯದರ್ಶಿಗಳನ್ನು ರಾಜ್ಯ ಸರ್ಕಾರವು ನೇಮಿಸಿಕೊಂಡಾಗ ಮೇಲೆ ತಿಳಿಸಲಾದ ಆಪ್ತ ಕಾರ್ಯದರ್ಶಿ ಮತ್ತು ಇತರ ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲು ಆಯಾಯ ಆಡಳಿತ ಸಚಿವಾಲಯ ಇಲಾಖೆಗಳಿಗೆ ಮಂಜೂರಾತಿ ನೀಡಲಾಗಿದೆ.

ರಾಜ್ಯ ಸಚಿವರ ಸ್ಥಾನಮಾನ ಹೊಂದಿದ ಮಾನ್ಯ ಸಂಸದೀಯ ಕಾರ್ಯದರ್ಶಿಗಳ ಆಯಾಯ ಸಚಿವಾಲಯ ಆಡಳಿತ ಇಲಾಖೆಗಳು ಮೇಲ್ಕಂಡ ರೀತಿಯಲ್ಲಿ ಆಪ್ತ ಕಾರ್ಯದರ್ಶಿ ಮತ್ತು ಇತರ ಸಿಬ್ಬಂದಿಗಳನ್ನು ಮೇಲೆ ಹೇಳಲಾದ ರೀತಿಯಲ್ಲಿ ನೇಮಿಸಿಕೊಳ್ಳಲು ಸಾಧ್ಯವಾಗದಿದ್ದ ಪಕ್ಷದಲ್ಲಿ, ಅವಶ್ಯವಾದ ಈ ಆದೇಶದ ಸಡಿಲಿಕೆಗೆ ಅಥವಾ ಮಾರ್ಪಾಡಿಗೆ ಆರ್ಥಿಕ ಇಲಾಖೆಯನ್ನು ನೇರವಾಗಿ ಸಂಪರ್ಕಿಸಿ ಅನುಮತಿ ಪಡೆಯುವಂತೆ ಸೂಚಿಸಲಾಗಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಆಇ 516 ವೆಚ್ಚ-12/2016 ದಿನಾಂಕ:13.07.2016 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–*I* | ಬೆಂಗಳೂರು, ಶುಕ್ರವಾರ, ಜುಲೈ ೨೨, ೨೦೧೬ (ಆಷಾಢ ೩೧, ಶಕ ವರ್ಷ ೧೯೩೮) | ನಂ. ೯೪೫ |
| ***Part–I*** | ***Bengaluru, Friday, July 22, 2016 (Ashada 31, Shaka Varsha 1938)*** | ***No. 945*** |


**ಸಿಬ್ಬಂದಿ ಮತ್ತು ಆಡಳಿತ ಸುಧಾಣೆ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** 2016–17ನೇ ಸಾಲಿನಲ್ಲಿ ಮಾಡುವ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ:–**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013, ಬೆಂಗಳೂರು ದಿನಾಂಕ: 07.06.2013.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013, ಬೆಂಗಳೂರು ದಿನಾಂಕ: 14.06.2013.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸೇನೌವ 2014, ಬೆಂಗಳೂರು ದಿನಾಂಕ: 06.02.2014.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸೇನೌವ 2015, ಬೆಂಗಳೂರು ದಿನಾಂಕ: 27.04.2015.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಸೇನೌವ 2015, ಬೆಂಗಳೂರು ದಿನಾಂಕ: 01.10.2015.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸೇನೌವ 2015, ಬೆಂಗಳೂರು ದಿನಾಂಕ: 14.10.2015.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸೇನೌವ 2016, ಬೆಂಗಳೂರು ದಿನಾಂಕ: 31.05.2016.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸೇನೌವ 2016, ಬೆಂಗಳೂರು ದಿನಾಂಕ: 30.06.2016.

**ಪ್ರಸ್ತಾವನೆ:–**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಕುರಿತಂತೆ ವಿಸ್ತೃತವಾದ ಮಾರ್ಗಸೂಚಿಗಳನ್ನು ನೀಡಲಾಗಿದೆ. ಈ ಮಾರ್ಗಸೂಚಿಗಳ ಪ್ರಕಾರ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಪ್ರತಿ ವರ್ಷ ಮೇ ಮತ್ತು ಜೂನ್ ತಿಂಗಳುಗಳಲ್ಲಿ ಮಾತ್ರ ಸದರಿ ಮಾರ್ಗಸೂಚಿಗಳಲ್ಲಿರುವ ಷರತ್ತುಗಳಿಗೊಳಪಟ್ಟು ಮಾಡಬಹುದಾಗಿದೆ.

ಪ್ರಸ್ತುತ 2016–17 ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಬಗ್ಗೆ ಮೇಲೆ ಓದಲಾದ ದಿನಾಂಕ: 31.05.2016 ರ ಆದೇಶದಲ್ಲಿ ದಿನಾಂಕ: 30.06.2016 ರವರೆಗೆ ವರ್ಗಾವಣೆಗಳನ್ನು ಮಾಡಬಹುದೆಂದು ಆದೇಶಿಸಲಾಗಿದೆ. ತದನಂತರ ವರ್ಗಾವಣೆ ಅವಧಿಯನ್ನು ಮೇಲೆ ಓದಲಾದ ದಿನಾಂಕ: 30.06.2016 ರ ಆದೇಶದಲ್ಲಿ ದಿನಾಂಕ: 15.07.2016 ರವರೆಗೆ ವಿಸ್ತರಿಸಲಾಗಿದೆ.ವರ್ಗಾವಣೆ ಅವಧಿಯನ್ನು ಮತ್ತೆ ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸೇನೌವ 2016 ಬೆಂಗಳೂರು, ದಿನಾಂಕ: 15.07.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮೇಲೆ ಉಲ್ಲೇಖ 1 ರಿಂದ 8 ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ನಮೂದಿಸಿರುವ ಷರತ್ತುಗಳೊಂದಿಗೆ 2016–17ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಪೂರ್ಣಗೊಳಿಸಲು ಅವಧಿಯನ್ನು **ಅಂತಿಮವಾಗಿ ದಿನಾಂಕ: 30.07.2016** ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗಾಯತ್ರಿ. ಎಂ.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–I | ಬೆಂಗಳೂರು, ಶುಕ್ರವಾರ, ಜುಲೈ ೨೨, ೨೦೧೬ (ಆಷಾಢ ೩೧, ಶಕ ವರ್ಷ ೧೯೩೮) | ನಂ. ೯೪೬ |
|---|---|---|
| *Part–I* | *Bengaluru, Friday, July 22, 2016 (Ashada 31, Shaka Varsha 1938)* | *No. 946* |


**ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನಶಾಸ್ತ್ರ ಸಚಿವಾಲಯ**
**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ** : ನ್ಯಾಯಬೆಲೆ ಅಂಗಡಿಗಳಿಗೆ ನೀಡುವ ಚಿಲ್ಲರೆ ಲಾಭಾಂಶದ ಪರಿಷ್ಕರಣೆ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ: ಆನಾಸ 67 ಡಿಆರ್‌ಎ 2011, ದಿ: 06–11–2013.
2. ಸರ್ಕಾರದ ಆದೇಶ ಸಂಖ್ಯೆ: ಆನಾಸ 13 ಡಿಆರ್‌ಎ 2016, ದಿ: 13–04–2016.
3. ಕೇಂದ್ರ ಸರ್ಕಾರದ ಗ್ರಾಹಕರ ವ್ಯವಹಾರಗಳ, ಆಹಾರ ಮತ್ತು ನಾಗರಿಕ ಸರಬರಾಜು ಮಂತ್ರಾಲಯದ ಅಧಿಸೂಚನೆ ಸಂಖ್ಯೆ GSR 636 (E), ದಿನಾಂಕ 17.08.2015.
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 1 ಕರ್ನಾಟಕ/2016–ಎನ್‌ಎಫ್‌ಎಸ್‌ಎ, ದಿನಾಂಕ 14.07.2016.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಾಂಕ (1) ರ ಸರ್ಕಾರಿ ಆದೇಶದಲ್ಲಿ ನ್ಯಾಯಬೆಲೆ ಅಂಗಡಿಯವರಿಗೆ ನೀಡಲಾಗುತ್ತಿರುವ ಲಾಭಾಂಶವನ್ನು ಅಕ್ಕಿಗೆ ರೂ.31/– ರಿಂದ, ಗೋಧಿಗೆ ರೂ. 25/– ರಿಂದ ಹಾಗೂ ಸಕ್ಕರೆಗೆ ರೂ.13.37/– ರಿಂದ ರೂ. 36/– ಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು. ಹಾಗೂ ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ ನ್ಯಾಯಬೆಲೆ ಅಂಗಡಿಯವರಿಗೆ ನೀಡಲಾಗುತ್ತಿರುವ ಲಾಭಾಂಶವನ್ನು ಪ್ರತಿ ಕ್ವಿಂಟಾಲ್‌ಗೆ ನಗದು ರೂಪದಲ್ಲಿ ರೂ. 36/– ಹಾಗೂ ವಸ್ತು ರೂಪದಲ್ಲಿ ಅಂದರೆ 50 ಕೆ.ಜಿ. ಸಾಮರ್ಥ್ಯದ ಎರಡು ಗೋಣಿಚೀಲದ ಬೆಲೆ ರೂ.20/– ರಂತೆ ಒಟ್ಟು ಲಾಭಾಂಶ ಪ್ರತಿ ಕ್ವಿಂಟಾಲ್‌ಗೆ ರೂ.56/– ಎಂದು ಸ್ಪಷ್ಟೀಕರಣ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (3)ರ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013ರನ್ವಯ ರಚಿಸಲಾದ Food Security (Assistance to State Government) Rules, 2015ರ ಪ್ರಕಾರ ನ್ಯಾಯಬೆಲೆ ಅಂಗಡಿ ಮಾಲೀಕರಿಗೆ ನೀಡುವ ಲಾಭಾಂಶದಲ್ಲಿ ಕೇಂದ್ರ ಸರ್ಕಾರವು ಒಟ್ಟು ಲಾಭಾಂಶ ರೂ.70ನ್ನು ಮೀರದಂತೆ, ಅದರ ಶೇಕಡಾ 50ರಷ್ಟನ್ನು ನೀಡುವುದು. ಅದರಂತೆ, ಕೇಂದ್ರ ಸರ್ಕಾರವು ನೆರವಿನ ರೂಪದಲ್ಲಿ ನ್ಯಾಯಬೆಲೆ ಅಂಗಡಿಯವರಿಗೆ ಪ್ರತಿ ಕ್ವಿಂಟಾಲ್‌ಗೆ ಗರಿಷ್ಠ ರೂ.35/– ಅನ್ನು ಲಾಭಾಂಶವಾಗಿ ನೀಡುವುದು. ಕೇಂದ್ರ ಸರ್ಕಾರದ ಪಾಲಿನ ಈ ಮೊತ್ತವನ್ನು ರಾಜ್ಯವು ಪ್ರಸ್ತುತ ನ್ಯಾಯಬೆಲೆ ಅಂಗಡಿಯವರಿಗೆ ನೀಡಲಾಗುತ್ತಿರುವ ಲಾಭಾಂಶದ ಜೊತೆಗೆ ಸೇರಿಸಿ ಹೆಚ್ಚುವರಿಯಾಗಿ ನೀಡಬಹುದಾಗಿರುತ್ತದೆ. ಆದ್ದರಿಂದ, ನ್ಯಾಯಬೆಲೆ ಅಂಗಡಿಯವರಿಗೆ ನೀಡುತ್ತಿರುವ ಒಟ್ಟಾರೆ ಲಾಭಾಂಶದ ಮೊತ್ತವು ನಗದು ರೂಪದಲ್ಲಿ ಪ್ರತಿ ಕ್ವಿಂಟಾಲಿಗೆ ರೂ. 70/– ಹಾಗೂ ವಸ್ತು ರೂಪದ ಎರಡು ಗೋಣಿಚೀಲಗಳ ರೂಪದಲ್ಲಿ ರೂ.20/– ಸೇರಿ ಪ್ರತಿ ಕ್ವಿಂಟಾಲ್‌ಗೆ ರೂ.90/–ಕ್ಕೆ ಹೆಚ್ಚಾಗುತ್ತದೆ.

ಮೇಲೆ ಓದಲಾದ ಕ್ರಮಾಂಕ (3)ರ ಅಧಿಸೂಚನೆಯ ಪ್ರಕಾರ Point of Sale ಯಂತ್ರಗಳ ಮೂಲಕ ವಹಿವಾಟು/ಮಾರಾಟ ನಡೆಸಲು ಹೆಚ್ಚುವರಿ ಲಾಭಾಂಶ ಪ್ರತಿ ಕ್ವಿಂಟಾಲ್‌ಗೆ ರೂ.17ರ ಶೇಕಡಾ 50ರಷ್ಟನ್ನು ಕೇಂದ್ರ ಸರ್ಕಾರವು ಭರಿಸುತ್ತದೆ. ಸದರಿ ನಿಯಮಗಳ ಪ್ರಕಾರ ಈ ಹೆಚ್ಚುವರಿ ಲಾಭಾಂಶವು Point of Sale ಯಂತ್ರಗಳ ಖರೀದಿ, ಬಳಸುವಿಕೆ, ನಿರ್ವಹಣೆ ವೆಚ್ಚ ಮತ್ತು ಈ ಯಂತ್ರಗಳ ಬಳಕೆಗೆ ಪ್ರೋತ್ಸಾಹ ಧನವನ್ನಾಗಿ ಸಹ ನೀಡಬಹುದಾಗಿರುತ್ತದೆ. ಅಲ್ಲದೇ, Point of Sale ಯಂತ್ರಗಳ ಮೂಲಕ ಮಾರಾಟ ಮಾಡುವುದಕ್ಕೆ ನೀಡಲಾಗುವ ಹೆಚ್ಚುವರಿ ಲಾಭಾಂಶವನ್ನು ಸದರಿ ಯಂತ್ರಗಳನ್ನು ಅಳವಡಿಸಲು ಆಯ್ಕೆ ಮಾಡಿಕೊಳ್ಳಲಾದ ಮಾದರಿಗಳ (ಅಂದರೆ ರಾಜ್ಯದಿಂದ ಖರೀದಿಸಲಾದ ಅಥವಾ ಸ್ವತಃ ನ್ಯಾಯಬೆಲೆ ಅಂಗಡಿದಾರರೇ ಖರೀದಿಸಿರುವ ಅಥವಾ 3ನೇ ವ್ಯಕ್ತಿಯಿಂದ ಅಳವಡಿಸಲ್ಪಟ್ಟಿರುವ ಮಾದರಿಗಳು) ಆಧಾರದಲ್ಲಿ ವಿವಿಧ ಭಾಗಿದಾರರ ನಡುವೆ ಹಂಚಿಕೆ ಮಾಡುವ ಕ್ರಮಗಳ ಬಗ್ಗೆ ರಾಜ್ಯ ಸರ್ಕಾರವು ನಿರ್ಧರಿಸಬೇಕಿರುತ್ತದೆ. ಮೇಲಿನ ಅಂಶಗಳ ಹಿನ್ನಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆನಾಸ 13 ಡಿಆರ್‌ಎ 2016, ಬೆಂಗಳೂರು, ದಿನಾಂಕ 21ನೇ ಜುಲೈ 2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೇಂದ್ರ ಸರ್ಕಾರದ ಪಾಲಿನ ಮೊತ್ತದೊಂದಿಗೆ ರಾಜ್ಯವು ಪ್ರಸ್ತುತ ನ್ಯಾಯಬೆಲೆ ಅಂಗಡಿಯವರಿಗೆ ನೀಡಲಾಗುತ್ತಿರುವ ಲಾಭಾಂಶವನ್ನು ಸೇರಿಸಿ ನಗದು ರೂಪದಲ್ಲಿ ಪ್ರತಿ ಕ್ವಿಂಟಾಲಿಗೆ ರೂ.36/-ರಿಂದ ರೂ. 70/- ಕ್ಕೆ ಹೆಚ್ಚಿಸಿ ನೀಡಲು ಆದೇಶಿಸಿದೆ. ಈ ಪರಿಷ್ಕೃತ ಚಿಲ್ಲರೆ ಲಾಭಾಂಶವು ಆಹಾರಧಾನ್ಯಗಳಿಗೆ ಮಾತ್ರ ಅನ್ವಯಿಸುತ್ತದೆ ಹಾಗೂ ಆಗಸ್ಟ್ 2016 ರಿಂದ ಜಾರಿಗೊಳಿಸಿದೆ.

ಅಲ್ಲದೆ, ವಸ್ತು ರೂಪದಲ್ಲಿ 50 ಕೆ.ಜಿ. ಸಾಮರ್ಥ್ಯದ ಎರಡು ಖಾಲಿ ಗೋಣಿಚೀಲಗಳ ಬೆಲೆ ರೂ.20/-ರಂತೆ ಸೇರಿಸಿ ಒಟ್ಟು ಲಾಭಾಂಶವನ್ನು ಪ್ರತಿ ಕ್ವಿಂಟಾಲ್‌ಗೆ 90/- ಎಂದು ಪರಿಗಣಿಸತಕ್ಕದ್ದು.

Point of Sale ಯಂತ್ರಗಳ ಮೂಲಕ ಪಡಿತರ ವಸ್ತುಗಳನ್ನು ಮಾರಾಟ ಮಾಡುವ ವಿವಿಧ ಭಾಗಿದಾರರಿಗೆ ಹೆಚ್ಚುವರಿ ಲಾಭಾಂಶವಾಗಿ ಪ್ರತಿ ಕ್ವಿಂಟಾಲ್‌ಗೆ ರೂ.17ನ್ನು ನೀಡುವ ಕುರಿತು ಪ್ರತ್ಯೇಕವಾದ ಸರ್ಕಾರಿ ಆದೇಶ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 394 ಇಎಕ್ಸ್‌ಪಿ-5/2016, ದಿನಾಂಕ 12-05-2016, ಎಫ್‌ಡಿ 443 ಇಎಕ್ಸ್‌ಪಿ-5/2016, ದಿನಾಂಕ 24-05-216 ಹಾಗೂ ಎಫ್‌ಡಿ 589 ಇಎಕ್ಸ್‌ಪಿ-5/2016, ದಿನಾಂಕ 11-07-2016ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ,

**ಅರ್ಚನ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 200 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ–I | ಬೆಂಗಳೂರು, ಗುರುವಾರ, ಜುಲೈ ೨೮, ೨೦೧೬ (ಶ್ರಾವಣ ೬, ಶಕ ವರ್ಷ ೧೯೩೮) | ನಂ. ೯೭೮ |
|---|---|---|
| *Part–I* | *Bengaluru, Thursday, July 28, 2016 (Shravana 6, Shaka Varsha 1938)* | *No. 978* |



**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಡಿತರ ಚೀಟಿದಾರರಿಗೆ ವಿತರಿಸುವ ಸೀಮೆಎಣ್ಣೆ ಪ್ರಮಾಣವನ್ನು ಪರಿಷ್ಕರಿಸುವ ಕುರಿತು.

**ಓದಲಾಗಿದೆ:** 1) ದಿನಾಂಕ:07.04.2016ರ ಸರ್ಕಾರಿ ಆದೇಶ ಸಂಖ್ಯೆ:ಆನಾಸ 347 ಡಿಆರ್ಎ 2013.

2) ದಿನಾಂಕ:14.07.2016ರ ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:P-23014/3/2016-LPG.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ:7.04.2016ರ ಸರ್ಕಾರಿ ಆದೇಶದಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಡಿತರ ಚೀಟಿದಾರರಿಗೆ ನೀಡಲಾಗುವ ಸೀಮೆಎಣ್ಣೆಯ ಪ್ರಮಾಣವನ್ನು ಗ್ರಾಮೀಣ ಮತ್ತು ನಗರ ಪ್ರದೇಶದ ಒಂದು ಮತ್ತು ಎರಡು ಸದಸ್ಯರಿರುವ ಪಡಿತರ ಚೀಟಿಗೆ ಮೂರು ಲೀಟರ್‌ನಂತೆ ಹಾಗೂ ಮೂರು ಮತ್ತು ಹೆಚ್ಚಿನ ಸದಸ್ಯರು ಇರುವ ಪಡಿತರ ಚೀಟಿಗೆ ನಾಲ್ಕು ಲೀಟರ್‌ನಂತೆ ನಿಗದಿಪಡಿಸಿ ಆದೇಶಿಸಲಾಗಿರುತ್ತದೆ.

ಗ್ರಾಮೀಣ ಪ್ರದೇಶದಲ್ಲಿನ ಪಡಿತರ ಚೀಟಿದಾರರಿಗೆ ಸಾರ್ವಜನಿಕ ವಿತರಣಾ ಪದ್ಧತಿಯಡಿ ಸೀಮೆಎಣ್ಣೆಯನ್ನು ಪ್ರತಿ ಅನಿಲ ರಹಿತ ಕಾರ್ಡುಗೆ ಮೂರು ಲೀಟರ್‌ನಂತೆ ಬಹಳ ವರ್ಷಗಳಿಂದಲೂ ವಿತರಿಸಲಾಗುತ್ತಿತ್ತು. ಅನರ್ಹ ಕಾರ್ಡುಗಳಿಗೆ ನೀಡಲಾಗುತ್ತಿದ್ದ ಸೀಮೆಎಣ್ಣೆಯನ್ನು ನಿಲ್ಲಿಸಿ, ಅದರಿಂದ ಉಳಿಕೆ ಸಾಧಿಸಿದ ಹಿನ್ನೆಲೆಯಲ್ಲಿ ಇದನ್ನು ಪ್ರತಿ ಕಾರ್ಡುಗೆ 5 ಲೀಟರ್‌ನಂತೆ ಜುಲೈ–2013ರಲ್ಲಿ ಪರಿಷ್ಕರಿಸಲಾಗಿರುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಇಂಧನದ ಅವಶ್ಯಕತೆಯ ಭಾಗಶ: ಪ್ರಮಾಣವನ್ನು ಸರಿದೂಗಿಸಲು ಮಾತ್ರ ಸೀಮೆಎಣ್ಣೆಯನ್ನು ಬಳಸುತ್ತಿರುವುದರಿಂದ, ಕಳೆದ 2–3 ವರ್ಷಗಳ ಅನುಭವಗಳ ಆಧಾರದ ಮೇಲೆ ಪ್ರತಿ ಕಾರ್ಡಿಗೆ ಮೂರು ಲೀಟರ್‌ನಂತೆ ಸೀಮೆಎಣ್ಣೆ ವಿತರಿಸುವುದು ಸೂಕ್ತವೆಂದು ಭಾವಿಸಲಾಗಿರುತ್ತದೆ. ಅಲ್ಲದೇ, ಸಾರ್ವಜನಿಕರಲ್ಲಿ ಯಾವುದೇ ಗೊಂದಲ ಉಂಟಾಗುವುದನ್ನು ತಡೆಯಲು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಒಂದೇ ರೀತಿಯ ವಿತರಣಾ ಪ್ರಮಾಣವನ್ನು ನಿಗದಿಪಡಿಸುವುದು ಸೂಕ್ತವಾಗಿರುತ್ತದೆ.

ಕೂಪನ್ ದೃಢೀಕೃತ ಸೀಮೆಎಣ್ಣೆ ವಿತರಣಾ ವ್ಯವಸ್ಥೆಯ ಜಾರಿಯು ದೊಡ್ಡ ಪ್ರಮಾಣದಲ್ಲಿ ಸೀಮೆಎಣ್ಣೆ ಮಾರ್ಗಾಂತರವಾಗುವುದನ್ನು ಕೂಡ ಬೆಳಕಿಗೆ ತಂದಿರುತ್ತದೆ. ಆದ್ದರಿಂದ ಪರಿಷ್ಕೃತ ವಿತರಣಾ ಪ್ರಮಾಣದ ಜಾರಿಯಿಂದಾಗಿ ಪಡಿತರ ಚೀಟಿದಾರರಿಗೆ ನಿಜವಾಗಿಯೂ ಅಗತ್ಯವಿರುವ ಪ್ರಮಾಣದಷ್ಟು ಸೀಮೆಎಣ್ಣೆ ಮಾತ್ರ ಸರಬರಾಜು ಆಗುವುದರಿಂದ ಸಹಾಯಧನಯುಕ್ತ ಸೀಮೆಎಣ್ಣೆಯು ದೊಡ್ಡ ಪ್ರಮಾಣದಲ್ಲಿ ಕಾಳಸಂತೆಗೆ ಮಾರ್ಗಾಂತರವಾಗುವುದನ್ನು ತಪ್ಪಿಸಲು ಸಹಾಯಕವಾಗಿರುತ್ತದೆ.

ಕೇಂದ್ರ ಸರ್ಕಾರವು ಸಬ್ಸಿಡಿಯುಕ್ತ ಸೀಮೆಎಣ್ಣೆಯ ಉಳಿಕೆಯನ್ನು ಸಾಧಿಸಿದ ರಾಜ್ಯಗಳಿಗೆ ನಗದು ಸಹಾಯಧನ ನೀಡುವ ಯೋಜನೆಯನ್ನು ಜಾರಿಗೆತಂದಿರುತ್ತದೆ. ಆದ್ದರಿಂದ, ಸಬ್ಸಿಡಿಯುಕ್ತ ಸೀಮೆಎಣ್ಣೆಯ ಪ್ರಮಾಣದ ಪರಿಷ್ಕರಣೆಯ ಪ್ರಸ್ತಾವನೆಯಿಂದ ರಾಜ್ಯ ಸರ್ಕಾರಕ್ಕೆ ಲಾಭವಾಗುವುದು. 2016–17ನೇ ಸಾಲಿನ ಸಬ್ಸಿಡಿಯುಕ್ತ ಸೀಮೆಎಣ್ಣೆಯನ್ನು ರಾಜ್ಯ ಸರ್ಕಾರವು ಕಡಿತಗೊಳಿಸಿದ ಕಾರಣ ಸಹಾಯಧನದ ಮೊದಲನೆ ಕಂತನ್ನು ಕೇಂದ್ರ ಸರ್ಕಾರವು ಮೇಲೆ ಓದಲಾದ ಕ್ರಮಾಂಕ (2)ರ ಕೇಂದ್ರ ಸರ್ಕಾರದ ಪತ್ರದಲ್ಲಿ ರಾಜ್ಯ ಸರ್ಕಾರಕ್ಕೆ ಬಿಡುಗಡೆಗೊಳಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆನಾಸ 347 ಡಿಆರ್‌ಎ 2013, ಬೆಂಗಳೂರು, ದಿನಾಂಕ 27.07.2016**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಾರ್ವಜನಿಕ ವಿತರಣಾ ಪದ್ಧತಿಯಡಿ ಅನಿಲ ರಹಿತ ಪಡಿತರ ಚೀಟಿದಾರರಿಗೆ ನೀಡಲಾಗುವ ಸೀಮೆಎಣ್ಣೆಯ ಪ್ರಮಾಣವನ್ನು ಪರಿಷ್ಕರಿಸಿ ಈ ಕೆಳಗೆ ತಿಳಿಸಿರುವಂತೆ ನಿಗಧಿಪಡಿಸಿ ಆದೇಶಿಸಿದೆ.

| ಗ್ರಾಮೀಣ ಮತ್ತು ನಗರ ಪ್ರದೇಶ | ಪ್ರಸ್ತುತ ವಿತರಿಸುತ್ತಿರುವ ಪ್ರಮಾಣ | ಪರಿಷ್ಕೃತ ವಿತರಣೆಯ ಪ್ರಮಾಣ |
|---|---|---|
| ಒಂದು ಮತ್ತು ಎರಡು ಸದಸ್ಯರು ಇರುವ ಪಡಿತರ ಚೀಟಿಗೆ | ಮೂರು ಲೀಟರ್ | ಮೂರು ಲೀಟರ್ |
| ಮೂರು ಮತ್ತು ಹೆಚ್ಚಿನ ಸದಸ್ಯರು ಇರುವ ಪಡಿತರ ಚೀಟಿಗೆ | ನಾಲ್ಕು ಲೀಟರ್ | ಮೂರು ಲೀಟರ್ |

ಈ ಆದೇಶವು ಸಬ್ಸಿಡಿಯುಕ್ತ ಸೀಮೆಎಣ್ಣೆ ಹಂಚಿಕೆಗಾಗಿ ಆಗಸ್ಟ್ 2016ರ ಮಾಹೆಯಿಂದ ಜಾರಿಗೆ ಬರತಕ್ಕದ್ದು. ಈ ಆದೇಶದ ಪ್ರಕಾರ ಅನಿಲ ರಹಿತ ಪಡಿತರ ಚೀಟಿದಾರರಿಗೆ ಸೀಮೆಎಣ್ಣೆ ವಿತರಣೆಯ ಪ್ರಮಾಣವನ್ನು ಪರಿಷ್ಕರಿಸಿ ಹಂಚಿಕೆ ಮಾಡುವ ಬಗ್ಗೆ ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯಹಾರಗಳ ಇಲಾಖೆ ರವರು ಸೂಕ್ತ ಕ್ರಮವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ,

**ಅರ್ಚನ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು
ಮಾಪನ ಶಾಸ್ತ್ರ ಇಲಾಖೆ.

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 200**

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– III | ಬೆಂಗಳೂರು, ಸೋಮವಾರ, ಜೂನ್ ೬, ೨೦೧೬ (ಜ್ಯೇಷ್ಠ ೧೬, ಶಕ ವರ್ಷ ೧೯೩೮) | ನಂ. ೭೯೪ |
|---|---|---|
| Part–III | Bengaluru, Monday, June 6, 2016 (Jyeishta 16, Shaka Varsha 1938) | No. 794 |


**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕೃಮಾಇ:01:ಚುನಾವಣೆ:2015, ಬೆಂಗಳೂರು, ದಿನಾಂಕ: 17–05–2016**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಬಿ.ಎನ್. ಶಿವಮೂರ್ತಿ ಆದ ನಾನು, ಬೆಂಗಳೂರು ನಗರ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1 | ಬೆಂಗಳೂರು ನಗರ | ಶ್ರೀ ಬಿ.ಜಿ. ಆಂಜಿನಪ್ಪ,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ,<br>ಬೆಂಗಳೂರು |

ತಮ್ಮ ನಂಬುಗೆಯ

**ಎಲ್.ಸಿ. ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 30 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-*III* | ಬೆಂಗಳೂರು, ಮಂಗಳವಾರ, ಜುಲೈ ೦೫, ೨೦೧೬ (ಆಷಾಢ ೧೪, ಶಕ ವರ್ಷ ೧೯೩೮) | ನಂ. ೮೯೨ |
|---|---|---|
| ***Part–III*** | ***Bengaluru, Tuesday, July 05, 2016 (Ashada 14 Shaka Varsha 1938)*** | ***No. 892*** |


**ELECTION COMMISSION OF INDIA, New Delhi**

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 11 CHUVIPA 2016, Bengaluru, Dated 5th July, 2016.**

Whereas, Biennial Elections to the Karnataka Legislative Council have been held in pursuance of the notification issued under section 16 of the Representation of the People Act, 1951 (Central Act 43 of 1951) for the purpose of filling 4 (four) seats of the members of the Karnataka Legislative Council elected from Graduates' and Teachers' Constituencies in the State, whose term of office expired on 4th July, 2016.

Now, therefore, in pursuance of section 74 of the said Act, the names of the members elected from Graduates' and Teachers' Constituencies at the said elections are hereby notified for general information:-

**Members elected from Graduates' and Teachers' Constituencies to the Karnataka Legislative Council:**

| Sl. No | Constituency | Name of Elected Member |
|---|---|---|
| 1. | Karnataka North-West Graduates' | NIRANI HANAMANT RUDRAPPA |
| 2. | Karnataka South Graduates' | K.T. SRIKANTEGOWDA |
| 3. | Karnataka North-West Teachers' | ARUN SHAHAPUR |
| 4. | Karnataka West Teachers' | BASAVARAJ SHIVALINGAPPA HORATTI |

By Order and in the name of the Governor of Karnataka,

**K.N.RAMESH**
Joint Chief Electoral Officer(Technical)
DPAR (Elections).

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 30 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–III | ಬೆಂಗಳೂರು, ಬುಧವಾರ, ಜುಲೈ ೦೬, ೨೦೧೬ (ಆಷಾಢ ೧೫, ಶಕ ವರ್ಷ ೧೯೩೮) | ನಂ. ೮೯೮ |
|---|---|---|
| ***Part–III*** | ***Bengaluru, Wednesday, July 06, 2016 (Ashada 15 Shaka Varsha 1938)*** | ***No. 898*** |


**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 37 ಎಂಎಲ್‌ಆರ್ 2016, ಬೆಂಗಳೂರು, ದಿನಾಂಕ: 06–07–2016**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 9ನೇ ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 211 ಎಂಎಲ್‌ಆರ್ 2013, ದಿನಾಂಕ:09–12–2014 ರಲ್ಲಿ ಅಧಿಸೂಚಿಸಿರುವ ಕನಕಪುರ ನಗರಸಭೆ ವ್ಯಾಪ್ತಿಯ ಪ್ರದೇಶಕ್ಕೆ, ಅನುಸೂಚಿ–ಎ ರಲ್ಲಿ ನಿರ್ಧಿಷ್ಟಪಡಿಸಲಾಗಿದ್ದ ಪ್ರದೇಶಗಳನ್ನು ಸೇರಿಸಲು ಅಧಿಸೂಚನೆ ಸಂಖ್ಯೆ:ನಅಇ 37 ಎಂಎಲ್‌ಆರ್ 2016, ದಿನಾಂಕ:12–05–2016ನ್ನು ದಿನಾಂಕ:12–05–2016 ರ ಕರ್ನಾಟಕ ರಾಜ್ಯ ಪತ್ರದ ಭಾಗ–3ರ ಸಂಖ್ಯೆ:736ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲದಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 4ನೇ ಪ್ರಕರಣದೊಂದಿಗೆ ಓದಿಕೊಂಡ 9ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 211 ಎಂಎಲ್‌ಆರ್ 2013, ದಿನಾಂಕ:09–12–2014 ರಲ್ಲಿ ಅಧಿಸೂಚಿಸಿರುವ ಕನಕಪುರ ನಗರಸಭೆ ವ್ಯಾಪ್ತಿಗೆ ಅನುಸೂಚಿ–ಎ ರಲ್ಲಿ ನಿರ್ಧಿಷ್ಟಪಡಿಸಲಾಗಿದ ಪ್ರದೇಶಗಳನ್ನು ಸೇರ್ಪಡೆ ಮಾಡಿ ಗೌರವಾನ್ವಿತ ಕರ್ನಾಟಕ ರಾಜ್ಯಪಾಲರು ಈ ಮೂಲಕ ಉದ್ಘೋಷಿಸಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ ಎ**

(1) ಕನಕಪುರ ಪಟ್ಟಣ

(2) ಗ್ರಾಮಗಳು

(1) ಅಂಬೇಡ್ಕರ್ ನಗರ

(2) ಹೌಸಿಂಗ್ ಬೋರ್ಡ್ ಕ್ವಾಟ್ರಸ್

(3) ಮಾಧವ ನಗರ

(4) ಕೆ.ಇ.ಬಿ. ಕಾಲೋನಿ

(5) ದೇಗುಲ ಮಠ

(6) ಮಹಾರಾಜ ಕಟ್ಟೆ ಗ್ರಾಮ

(7) ಕೆಳಕಂಡ ಸರ್ವೆ ನಂಬರುಗಳು

ಶಿವನಹಳ್ಳಿ ಗ್ರಾಮದ ಸರ್ವೆ ನಂಬರುಗಳು:–23, 24, 42, 43, 44, 45, 46, 47, 48, 49, 403, 404, 99, 443, 388, 70, 71, 72, 73, 74, 75, 76, 77, 78, 79, 80, 81, 82, 83, 84, 85, 86, 87, 88, 89, 90, 91, 92, 93, 94, 95, 96, 97, 98, 99, 100, 101, 102, 103, 104, 105, 106, 107, 108, 109, 110, 114, 115, 394, 429, 436, 477, 478, 66, 67.

ಕಸಬ ಸರ್ವೆ ನಂಬರುಗಳು:–35, 36, 37, 38, 39, 40, 41, 42, 43, 44, 45, 46, 47, 48, 49, 51, 52, 53, 54, 55, 678, 679, 680, 681, 682, 642, 643, 644, 645, 646, 647, 648, 649, 650, 651, 652, 653, 654, 655, 635, 750, 761, 732, 763, 764, 737, 770, 771, 715, 712, 778, 638, 623, 714, 772, 773, 777, 776, 775, 774, 736, 602, 894, 595, 593, 592, 591, 508, 509, 510, 512, 513, 514, 515, 516, 517, 518, 519, 520, 544, 254, 255, 25, 263, 265, 266, 268, 269, 270, 273, 274, 275, 276, 277, 278, 279, 284, 285, 287, 288, 289, 290, 291, 292, 293, 294, 295, 296, 297, 298, 299, 300, 301, 500, 521, 522, 523, 524, 525, 526, 527, 528, 529, 530, 531, 532, 533, 534, 535, 536, 537, 538, 539, 540, 541, 542, 543, 596, 597, 598, 599, 600, 601, 602, 603, 604, 637, 638, 640, 718, 719, 720, 721, 722, 723, 726, 740, 751, 762, 765.

ಅರಳಾಳು ಗ್ರಾಮದ ಸರ್ವೆ ನಂಬರ್‌ಗಳು:– 145, 146, 239, 240, 210, 241.

ಕಲ್ಲಹಳ್ಳಿ ಸರ್ವೆ ನಂಬರುಗಳು:– 35, 36, 37, 38, 39, 40, 41, 42, 50, 51, 52, 53, 54, 55, 67, 68, 2, 3, 69, 71, 78, 77, 72, 76, 91, 92, 93, 75, 94, 95, 96, 97, 98,

**ಅನುಸೂಚಿ–ಬಿ**

ಕನಕಪುರ ನಗರದ ಗಡಿಯು ಸರ್ವೆ ನಂ. 534 ರ ರಾಮನಗರ, ಕನಕಪುರ ರಸ್ತೆಯಿಂದ ಪ್ರಾರಂಭವಾಗಿ ಸರ್ವೆ ನಂ. 533, 532, 531, 529, 528, 524, 523, 517, 516, 514, 509, 500, 507, 506 ರ ಮುಖಾಂತರ ಅರ್ಕಾವತಿ ನದಿಯನ್ನು ಸೇರಿ ನಂತರ ಅರ್ಕಾವತಿ ಪಕ್ಕದಲ್ಲಿ ಸಾಗಿ ಸರ್ವೆ ನಂ. 502 ರಲ್ಲಿ ಬೆಂಗಳೂರು– ಮೈಸೂರು ರಸ್ತೆಯ ಅರ್ಕಾವತಿ ನದಿಯ ಸೇತುವೆಯ ದಕ್ಷಿಣ ತುದಿಯನ್ನು ಸೇರಿ ಉತ್ತರಾಭಿಮುಖವಾಗಿ ಸಾಗಿ ಸೇತುವೆಯ ಉತ್ತರ ದಡ ಸೇರಿ ನಂತರ ಪಶ್ಚಿಮಾಭಿಮುಖವಾಗಿ ಕಲ್ಲಹಳ್ಳಿ ಗ್ರಾಮ ಸರ್ವೆನಂ. 91 ರಲ್ಲಿ ಸಾಗಿ ನಂತರ ಉತ್ತರಭಿಮುಖವಾಗಿ ಸರ್ವೆ ನಂ. 92, 93, 94, 62, 61, 77, 78, 67, 68, 69, 46, 54, 49, 50, 51, 42, 41, 40, 36, 35 ರ ಮುಖಾಂತರ ಬೆಂಗಳೂರು–ಮೈಸೂರು ರಸ್ತೆಯಲ್ಲಿ ಛೇದಿಸಿ, ನಂತರ ದಕ್ಷಿಣಾಭಿಮುಖವಾಗಿ ಕಸಬಾ ಸರ್ವೆ ನಂ. 428, 435, 438, 446, 453, 456, 457, 458, 459, 460, 461, 462, 463, 464, 465, 468, 473, 474, 478, 479, 480, 481, 482, 483, 487, 377, 376, 366, 367 ರ ಮುಖಾಂತರ ಅರ್ಕಾವತಿಯ ನದಿಯ ದಡವನ್ನು ಸೇರಿ ನಂತರ ಅರ್ಕಾವತಿ ನದಿ ದಡದಲ್ಲಿ ಸಾಗಿ ಸರ್ವೆ ನಂ. 240ನ್ನು ಸೇರಿ ಪೂರ್ವಭಿಮುಖವಾಗಿ ತಿರುಗಿ ಸರ್ವೆನಂ. 240, 241, 225, 226, 228 ನ್ನು ಸೇರಿ ನಂತರ ಸರ್ವೆನಂ. 186, 187, 188, 189, 190, 193, 194, 195, 197, 200, 201, 205, 204 ಸರ್ವೆ ನಂ. 07 ನ್ನು ತಲುಪಿ, ಅರ್ಕಾವತಿ ನದಿಯನ್ನು ಛೇದಿಸಿ ಸರ್ವೆ ನಂ. 7, 9, 10, 11, 12, 15, 62, 57, 56, 55, 54, 53, 52, 45, 44, 43, 41, 40 ಸೇರಿ ನಂತರ ದಕ್ಷಿಣ ದಿಕ್ಕಿನಲ್ಲಿ ಅರ್ಕಾವತಿ ನದಿ ದಡದಲ್ಲಿ ಸಾಗಿ ಅರಳಾಳು ಗಡಿಯನ್ನು ಸೇರಿದ ನಂತರ ಪಶ್ಚಿಮ ದಿಕ್ಕಿನಲ್ಲಿ ಅರಳಾಳು ಗಡಿಯಲ್ಲಿ ಸಾಗಿ ಅರಳಾಳು ಸರ್ವೆ ನಂ. 146 ಸೇರಿ ನಂತರ ದಕ್ಷಿಣ ದಿಕ್ಕಿನಲ್ಲಿ ಸರ್ವೆ ನಂ. 146, 239, 240, 145 ನ್ನು ಸೇರಿ ನಂತರ ಪಶ್ಚಿಮ ದಿಕ್ಕಿನಲ್ಲಿ ಶಿವನಹಳ್ಳಿ ಸರ್ವೆ ನಂ. 67, 47, 48, 49 ರ ಮುಖಾಂತರ ಸಾತನೂರು ರಸ್ತೆಯನ್ನು ಸೇರಿ ಸರ್ವೆ ನಂ. 23, 24 ನ್ನು ಸೇರಿ ನಂತರ ಉತ್ತರ ದಿಕ್ಕಿನಲ್ಲಿ

ಸಾಗಿ ಸರ್ವೆ ನಂ. 24, 41, 115, 43, 114, 98,(ನಾರಾಯಣಪ್ಪನ ಕೆರೆ)109, 110, 107, 106, 104, ಮತ್ತು 394 ರ ಮುಖಾಂತರ ಕನಕಪುರ ಕಸಬಾ ಗಡಿಯನ್ನು ಸೇರಿ ನಂತರ ಕನಕಪುರ ಕಸಬಾ ಸರ್ವೆ ನಂ. 678 ನ್ನು ಸೇರಿ ನಂತರ ಪಶ್ಚಿಮ ದಿಕ್ಕಿನಲ್ಲಿ ಸಾಗಿ ಸರ್ವೆ ನಂ. 677, ರ ಗಡಿಯಲ್ಲಿ ಸಾಗಿ ನಂತರ ಉತ್ತರ ದಿಕ್ಕಿನಲ್ಲಿ ಸಾಗಿ ಪೂರ್ವಭಿಮುಖವಾಗಿ ಸರ್ವೆ ನಂ. 736, 774, 775, 776 ರಲ್ಲಿ ಸೇರಿ ನಂತರ ಉತ್ತರಾಭಿಮುಖವಾಗಿ ಸರ್ವೆ ನಂ. 641, 640, 638, 726, 597, 598, 740, 595, 596, 593, 592 ನ್ನು ಅಂದರೆ ರಾಮನಗರ ಕನಕಪುರ ರಸ್ತೆಯನ್ನು ಸೇರಿ ಸರ್ವೆ ನಂ. 534 ಕ್ಕೆ ಅಂದರೆ ಮೊದಲು ಹೊರಟ ಸ್ಥಾನಕ್ಕೆ ಬಂದು ಸೇರುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**URBAN DEVELOPMENT SECRETARIAT**

**NOTIFICATION**

**No. UDD 37 MLR 2016, Bengaluru, Dated:06-07-2016**

Whereas the notification of including the areas mentioned in Schedule-A to the existing 'City Municipal Council' of Kanakapura specified vide Government 'Notification No. UDD 211 MLR 2013, dated 09-12-2014' was published as required by Section 9 of the Karnataka Municipalities Act 1964, vide 'Government notification No. UDD 37 MLR 2016, dated: 12-05-2016'in part- III, No.736 of Karnataka Gazette Extraordinary, dated:12-05-2016 inviting objections from all persons likely to be affected thereby on or before thirty days from the date of publication of the above notification .

And whereas the notification was made available to the public on the day of publication;

And whereas no objections were received within the stipulated time were duly examined;

In exercise of the powers conferred by Section 4 read with Section 9 of the Karnataka Municipalities Act 1964, the Hon'ble Governor, hereby include the areas mentioned in Schedule-A to the existing 'City Municipal Council' of Kanakapura, specified vide Government 'Notification No. UDD 211 MLR 2013, dated 09-12-2014'.

By Order and in the name of Governor of Karnataka

**SIDDIQ PASHA**
Under Secretary to Government
Urban Development Department

**SCHEDULE-A**

1) Kanakapura town
2) Villages:
    1. Ambedkar Nagara.
    2. Housing Board Quarters
    3. Madhava Nagara
    4. K.E.B. Colony
    5. Degula Mutt
    6. Maharaja Katte
    7. Following Sy.Nos

Shivanahalli Survey Nos:- 23, 24, 42, 43, 44, 45, 46, 47, 48, 49, 403, 404, 99, 443, 388, 70, 71, 72, 73, 74, 75, 76, 77, 78, 79, 80, 81, 82, 83, 84, 85, 86, 87, 88, 89, 90, 91, 92, 93, 94, 95, 96, 97, 98, 99, 100, 101, 102, 103, 104, 105, 106, 107, 108, 109, 110, 114, 115, 394, 429, 436, 477, 478,66,67.

Kasaba Survey Numbers:- 35, 36, 37, 38, 39, 40, 41, 42, 43, 44, 45, 46, 47, 48, 49, 51, 52, 53, 54, 55, 678, 679, 680, 681, 682, 642, 643, 644, 645, 646, 647, 648, 649, 650, 651, 652, 653, 654, 655, 635, 750, 761, 732, 763, 764, 737, 770, 771, 715, 712, 778, 638, 623, 714, 772, 773, 777, 776, 775, 774, 736, 602, 894, 595, 593, 592, 591, 508, 509, 510, 512, 513, 514, 515, 516, 517, 518, 519, 520, 544, 254, 255, 25, 263, 265, 266, 268, 269, 270, 273, 274, 275, 276, 277, 278, 279, 284, 285, 287, 288, 289, 290, 291, 292, 293, 294, 295, 296, 297, 298, 299, 300, 301, 500, 521, 522, 523, 524, 525, 526, 527, 528, 529, 530, 531, 532, 533, 534, 535, 536, 537, 538, 539, 540, 541, 542, 543, 596, 597, 598, 599, 600, 601, 602, 603, 604, 637, 638, 640, 718, 719, 720, 721, 722, 723, 726, 740, 751, 762, 765.

Aralalu village Survey Nos:- 145, 146, 239, 240, 210, 241.

Kallahalli Survey Nos:- 35, 36, 37, 38, 39, 40, 41, 42, 50, 51, 52, 53, 54, 55, 67, 68, 2, 3, 69, 71, 78, 77, 72, 76, 91, 92, 93, 75, 94, 95, 96, 97, 98.

**SCHEDULE-B**

The boundary of Kanakapura town commences at the Sy.No.534 on – Ramanagara-Kanakapura Road and runs through Sy No.533, 532, 531, 529, 528, 524, 523, 516, 517, 514, 509,500, 507 and 506, it reaches Arkavathi river, runs along the river directions, at Sy.no.502 it reaches Bangalore –Mysore road Southern end of the arkavathi bridge and crosses Arkavathi river. it moves Northern direction reaches Northern end of the bridge there moves towards Western direction and reaches Kallahalli Sy.No .91 move towards Northern direction in Sy Nos 92, 93, 94, 62, 61, 77, 78, 67, 68, 69, 46, 54, 49, 50, 51, 42, 41, 40, 36, 35, and cross the Bangalore-Mysore Road there it moves towards Southern direction along Kasaba Sy.Nos. 428, 435, 438, 446, 453, 456, 457, 458, 459, 460, 461, 462, 463, 464, 465, 468, 473, 474, 478, 479, 480, 481, 482, 483, 487, 377, 376, 366, 367 and reaches Arkavathi river, there it passes along Arkavathi river and reach Sy.No 240 then turns towards Eastern direction along Sy.Nos.240, 241, 225, 226, and reaches 228 and moves on Sy Nos 186, 187, 188,189, 190, 193,194, 195, 197, 200, 201, 205, 204 and reaches 07 and crosses Arkavathi river and moves on Sy.No 7, 9, 10, 11, 12, 15, 62, 57, 56, 55, 54, 53, 52, 45, 44, 43, 41 and reaches 40 and passes along Arkavathi river towards southern side reaches Aralalu village boundary. And Further it moves along western side of Aralalu village boundry raches Sy.No 146 and there turns towards Southern direction and passes on SY.Nos 146,239,240 and reaches 145 and turn towards western direction passess through shivanalli sy No. 67,47,48,49 and reaches Sathnoor Road and then passes and reaches on Sy.No 23, 24 and turn towards northern direction passes on Sy No. 24, 41, 115, 43, 114, 98(Narayanappa Lake)109, 110, 107, 106, 104 and reaches Kasaba boundary through Kasaba Sy. Nos 394 and reaches kasaba sy No.678 then turn towards Western direction along Sy.No 677 boundary and passes on Northern side and the passes through eastern direction on Sy.No 736, 774, 775, and reaches 776 and then turn towards Northern direction on Sy no. 641, 640, 638, 726, 597, 598, 740, 595, 596, 593 and reaches Sy No.592 Kanakapura-Ramanagaram Road and turn towards Sy.No 534 from where it started.

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–III | ಬೆಂಗಳೂರು, ಸೋಮವಾರ, ಜುಲೈ ೧೧, ೨೦೧೬ (ಆಷಾಢ ೨೦, ಶಕ ವರ್ಷ ೧೯೩೮) | ನಂ. ೯೦೧ |
|---|---|---|
| Part–III | Bengaluru, Monday, July 11, 2016 (Ashada 20 Shaka Varsha 1938) | No. 901 |

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 78 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ:11–07–2016.**

1979ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಾವಳಿಯ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ:14)ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ದಿನಾಂಕ:11–04–2016 ರಂದು ನಡೆದ ಚುನಾವಣೆಯಲ್ಲಿ ಕಲಬುರಗಿ ಮಹಾನಗರ ಪಾಲಿಕೆಗೆ 18ನೇ ಅವಧಿಗೆ ಮೇಯರ್ ಹಾಗೂ ಉಪಮೇಯರ್ ಆಗಿ ಈ ಕೆಳಕಂಡ ಅಭ್ಯರ್ಥಿಗಳು ಆಯ್ಕೆಯಾಗಿದ್ದು, ಸದರಿ ಅಭ್ಯರ್ಥಿಗಳ ಹೆಸರನ್ನು ಈ ಮೂಲಕ ಸಾರ್ವಜನಿಕ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| *ಕ್ರ ಸಂ* | *ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ* | *ಮೀಸಲಾತಿ* |
|---|---|---|
| | **ಮೇಯರ್ ಸ್ಥಾನಕ್ಕೆ** | |
| 1 | ಶ್ರೀ ಸೈಯದ್ ಅಹ್ಮದ ತಂದೆ ಸೈಯ್ಯದ ಇಕ್ಬಾಲ್ | ಸಾಮಾನ್ಯ |
| | **ಉಪ ಮೇಯರ್ ಸ್ಥಾನಕ್ಕೆ** | |
| 2 | ಶ್ರೀಮತಿ ಶರಣಮ್ಮ | ಸಾಮಾನ್ಯ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ಧಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 25 ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–IVA | ಬೆಂಗಳೂರು, ಶುಕ್ರವಾರ, ಜುಲೈ ೧೫, ೨೦೧೬ (ಆಷಾಢ ೨೪, ಶಕ ವರ್ಷ ೧೯೩೮) | ನಂ. ೯೨೦ |
|---|---|---|
| *Part–IVA* | *Bengaluru, Friday, July 15, 2016 (Ashada 24 Shaka Varsha 1938)* | *No. 920* |

**KARNATAKA LEGISLATIVE ASSEMBLY SECRETARIAT**
**NOTIFICATION**
**No. KLA/LGA/23/Bill/2016, Bengaluru, Dated: 15.07.2016**

The following Bill was introduced in Legislative Assembly on 15.07.2016

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಹತ್ತನೇ ಅಧಿವೇಶನ**

## ಕರ್ನಾಟಕ ಅರಣ್ಯ (ತಿದ್ದುಪಡಿ) ವಿಧೇಯಕ, 2016

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ–23)**

ಕರ್ನಾಟಕ ಅರಣ್ಯ ಅಧಿನಿಯಮ, 1963ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಅರಣ್ಯ ಅಧಿನಿಯಮ, 1963ನ್ನು (1964ರ ಕರ್ನಾಟಕ ಅಧಿನಿಯಮ 05) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಅರಣ್ಯ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಅರಣ್ಯ ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 05) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದ (1)ನೇ ಖಂಡದ ತರುವಾಯ, ಈ ಮುಂದಿನ ಖಂಡವನ್ನು 16ನೇ ಆಗಸ್ಟ್ 2008ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ:–

"(1–ಎ) "ಪರಿಗಣನೆ" ಎಂದರೆ, ರಾಜ್ಯ ಸರ್ಕಾರವು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಇತರ ಮೊತ್ತವನ್ನು ಒಳಗೊಂಡಂತೆ ಅರಣ್ಯ ಉತ್ಪನ್ನವನ್ನು ಮಾರಾಟ ಮಾಡಿದ್ದಕ್ಕೆ ಮತ್ತು ಲೆಕ್ಕ ಹಾಕಿದ್ದಕ್ಕೆ ಸಂಬಂಧಿಸಿದಂತೆ ಸ್ವೀಕರಿಸಲಾದ ಅಥವಾ ಸ್ವೀಕರಿಸಬಹುದಾದ ದರ;"

**3. XI ಎ ಅಧ್ಯಾಯದ ತಿದ್ದುಪಡಿ.–** ಮೂಲ ಅಧಿನಿಯಮದ XI ಎ ಅಧ್ಯಾಯದಲ್ಲಿ,–

(1) ಶೀರ್ಷಿಕೆಗಳನ್ನು ಒಳಗೊಂಡಂತೆ ಮತ್ತು 98ಎ ಹಾಗೂ 98ಬಿ ಪ್ರಕರಣಗಳಲ್ಲಿ "ತೆರಿಗೆ" ಎಂಬ ಪದವು ಎಲ್ಲೆಲ್ಲಿ ಬರುತ್ತದೆಯೋ ಅಲ್ಲೆಲ್ಲ "ಶುಲ್ಕ" ಎಂಬ ಪದವನ್ನು ಪ್ರತ್ಯಯಗಳೊಂದಿಗೆ, 16ನೇ ಆಗಸ್ಟ್ 2008ರಿಂದ ಜಾರಿಗೆ ಬರುವಂತೆ, ಪ್ರತಿಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು;

(2) 98ಎ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ,-

(ಎ) "ಅಥವಾ ನಿಯಂತ್ರಣದಲ್ಲಿನ" ಎಂಬ ಪದಗಳಿಗೆ "ಅಥವಾ ರಾಜ್ಯ ಸರ್ಕಾರದ ನಿಯಂತ್ರಣದಲ್ಲಿನ" ಎಂಬ ಪದಗಳನ್ನು 16ನೇ ಆಗಸ್ಟ್ 2008ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆಯೆಂದು ಭಾವಿಸತಕ್ಕದ್ದು;

(ಬಿ) ಕರ್ನಾಟಕ ಅರಣ್ಯ (ತಿದ್ದುಪಡಿ) ಅಧಿನಿಯಮ, 2015ರ (2015ರ ಕರ್ನಾಟಕ ಅಧಿನಿಯಮ 41) ಪ್ರಾರಂಭದ ದಿನಾಂಕದಿಂದ ಜಾರಿಗೆ ಬರುವಂತೆ ಎರಡನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು; ಮತ್ತು

(ಸಿ) (1)ನೇ ಉಪಪ್ರಕರಣದ ಎರಡನೇ ಪರಂತುಕದ ತರುವಾಯ ಈ ಮುಂದಿನ ಪರಂತುಕವನ್ನು 16ನೇ ಆಗಸ್ಟ್ 2008ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:-

"ಮತ್ತೂ ಪರಂತು, ಅರಣ್ಯ ಉತ್ಪನ್ನವಾಗಿರುವ ಖನಿಜಗಳಿಗೆ ಸಂಬಂಧಪಟ್ಟಂತೆ ಅರಣ್ಯ ಅಭಿವೃದ್ಧಿ ಶುಲ್ಕದ ದರವು ಶೇಕಡ ಹನ್ನೆರಡು ಆಗಿರತಕ್ಕದ್ದು."

(ii) (1)ನೇ ಉಪಪ್ರಕರಣದ ತರುವಾಯ, ಈ ಮುಂದಿನ ವಿವರಣೆಗಳನ್ನು 16ನೇ ಆಗಸ್ಟ್ 2008ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:-

"**ವಿವರಣೆ:** (1) ಸಂದೇಹಗಳ ನಿವಾರಣೆಗಾಗಿ, ಈ ಉಪಪ್ರಕರಣದ ಉದ್ದೇಶಗಳಿಗಾಗಿ, "ರಾಜ್ಯ ಸರ್ಕಾರವು ಅಧಿಸೂಚಿಸಿದ ಒಂದು ನಿಕಾಯವು" ಎಂಬ ಪದಗಳಿಗೆ, ಹಿಂದು ಅವಿಭಕ್ತ ಕುಟುಂಬ, ಕಂಪನಿ ಅಥವಾ ವಿದೇಶಿ ಕಂಪನಿ, ಪಾಲುದಾರಿಕೆ ಸಂಸ್ಥೆಗಳು, ಸಂಘಗಳು, ಸಹಕಾರಿ ಸಂಘಗಳು, ಇತರ ನಿಗಮಿತ ನಿಕಾಯಗಳು, ನ್ಯಾಸಗಳು ಅರಣ್ಯ ಪ್ರದೇಶದಲ್ಲಿ ಇರುವ ಗಣಿಗಳು ಮತ್ತು ಕ್ವಾರಿಗಳ ಗುತ್ತಿಗೆದಾರರು ಅಥವಾ ಯಾವುದೇ ಇತರ ಸಂಘ ಅಥವಾ ಸಮಿತಿ ಅಥವಾ ವ್ಯಕ್ತಿಯನ್ನು ಒಳಗೊಂಡು, ಅಂಥ ವ್ಯಕ್ತಿಗಳು ಅಥವಾ ಉದ್ಯಮಗಳು ಸ್ವತಃ ನ್ಯಾಯಿಕ ಉದ್ಯಮವಾಗಿ (juristic entity) ರಚನೆಗೊಂಡಿರಲಿ ಅಥವಾ ರಚನೆಗೊಳ್ಳದಿರಲಿ, ಮತ್ತು ಅಂಥ ವ್ಯಕ್ತಿಗಳು ಅಥವಾ ಉದ್ಯಮಗಳು ಒಟ್ಟಿಗೆ ಸೇರಿಕೊಂಡು ಒಂದು ಗುಂಪಾಗಿ ಅಥವಾ ನಿಕಾಯವಾಗಿ ಕಾರ್ಯನಿರ್ವಹಿಸಲಿ ಅಥವಾ ನಿರ್ವಹಿಸದಿರಲಿ, ವ್ಯಕ್ತಿಗಳಾಗಿ ಅಥವಾ ಇತರ ಸಂಸ್ಥೆಗಳಾಗಿ, ಅರಣ್ಯದಲ್ಲಿ ಕಂಡುಬಂದ ಅಥವಾ ಅರಣ್ಯದಿಂದ ತಂದ ಅರಣ್ಯ ಉತ್ಪನ್ನದ ವಿಲೇವಾರಿಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ತೊಡಗಿರುವ ಎಲ್ಲಾ ಉದ್ಯಮಗಳು ಎಂದು ಅರ್ಥ ಮತ್ತು ಅವುಗಳನ್ನು ಒಳಗೊಳ್ಳತಕ್ಕದ್ದು ಎಂದು ಈ ಮೂಲಕ ಘೋಷಿಸಲಾಗಿದೆ.

**ವಿವರಣೆ:** (2) ಸಂದೇಹಗಳ ನಿವಾರಣೆಗಾಗಿ, ಈ ಉಪಪ್ರಕರಣದ ಉದ್ದೇಶಕ್ಕಾಗಿ, "ಅಥವಾ ಅನ್ಯಥಾ" ಎಂಬ ಪದಗಳು ಸ್ವಯಂ ಬಳಕೆ (captive consumption) ಮುಖಾಂತರ ವಿಲೇ ಮಾಡುವುದನ್ನು ಒಳಗೊಳ್ಳುತ್ತದೆ ಎಂದು ಈ ಮೂಲಕ ಘೋಷಿಸಲಾಗಿದೆ.

**ವಿವರಣೆ:** (3) ಸಂದೇಹಗಳ ನಿವಾರಣೆಗಾಗಿ, ಅರಣ್ಯ ಉತ್ಪನ್ನದ ವಿಲೇವಾರಿಯ ಮೇಲೆ, ಅರಣ್ಯ ಉತ್ಪನ್ನವನ್ನು ಕರ್ನಾಟಕ ರಾಜ್ಯದ ಒಳಗೆ ಅಥವಾ ಹೊರಗೆ ಮಾರಾಟ ಮಾಡುವುದಕ್ಕೆ ಅಥವಾ ರಫ್ತಿನ ಉದ್ದೇಶಕ್ಕೆ ಅಥವಾ ಸ್ವಯಂ ಬಳಕೆಗೆ ಉದ್ದೇಶಿಸಿರುವುದನ್ನು ಗಣನೆಗೆ ತೆಗೆದುಕೊಳ್ಳದೆ ಅಂಥ ಅರಣ್ಯ ಉತ್ಪನ್ನದ ವಿಲೇವಾರಿ ಮೇಲೆ ಅರಣ್ಯ ಅಭಿವೃದ್ಧಿ ಶುಲ್ಕವನ್ನು ವಿಧಿಸತಕ್ಕದ್ದು ಎಂದು ಈ ಮೂಲಕ ಘೋಷಿಸಲಾಗಿದೆ. "

(iii) (1-ಎ) ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(1-ಬಿ) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಅರಣ್ಯ ಉತ್ಪನ್ನವನ್ನು ರಾಜ್ಯ ಸರ್ಕಾರವು ವಿಲೇವಾರಿ ಮಾಡಿದಾಗ ಹೊರತು, ಅರಣ್ಯದಲ್ಲಿ ಕಂಡುಬರದ ಅಥವಾ ಅರಣ್ಯದಿಂದ ತಂದಿರದ ಅರಣ್ಯ ಉತ್ಪನ್ನದ ಮೇಲೆ ಯಾವುದೇ ಶುಲ್ಕವನ್ನು ವಿಧಿಸತಕ್ಕದ್ದಲ್ಲ;

(1-ಸಿ) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, 16ನೇ ಆಗಸ್ಟ್, 2008ರಿಂದ ಕರ್ನಾಟಕ ಅರಣ್ಯ (ತಿದ್ದುಪಡಿ) ಅಧಿನಿಯಮ, 2015ರ (2015ರ ಕರ್ನಾಟಕ ಅಧಿನಿಯಮ 41) ಪ್ರಾರಂಭದವರೆಗಿನ ಕಾಲಾವಧಿಯಲ್ಲಿ ಡಿಮಾಂಡ್‌ಮಾಡದಿರುವ ಅರಣ್ಯ ಉತ್ಪನ್ನದ ಮೇಲೆ ಯಾವುದೇ ಅರಣ್ಯ ಅಭಿವೃದ್ಧಿ ಶುಲ್ಕವನ್ನು, ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದಲ್ಲ; ಮತ್ತು

(1-ಡಿ) ರಾಜ್ಯ ಸರ್ಕಾರವು ಪೂರ್ವಾನ್ವಯ ದಿನಾಂಕದಿಂದ ಅರಣ್ಯ ಅಭಿವೃದ್ಧಿ ಶುಲ್ಕ ವಿಧಿಸುವ, ಲೆಕ್ಕಹಾಕುವ ಮತ್ತು ಸಂಗ್ರಹಣೆಯ ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಬಹುದು."

(3) 98ಬಿ ಪ್ರಕರಣದ ತರುವಾಯ ಈ ಮುಂದಿನ ಹೊಸ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:-

"**98ಸಿ. ಅರಣ್ಯ ಅಭಿವೃದ್ಧಿ ಶುಲ್ಕವನ್ನು ವಿನಾಯಿತಿಗೊಳಿಸಲು ಅಥವಾ ಇಳಿಸಲು ರಾಜ್ಯ ಸರ್ಕಾರಕ್ಕಿರುವ ಅಧಿಕಾರ.-** (1) ರಾಜ್ಯ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದ ಹಾಗೆ ಮಾಡುವುದು ಅವಶ್ಯಕವೆಂದು ತಾನು ಅಭಿಪ್ರಾಯಪಟ್ಟರೆ, ಅಧಿಸೂಚನೆಯ ಮೂಲಕ ಹಾಗೂ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಮತ್ತು ಅಂಥ ಅವಧಿಗಾಗಿ, ಯಾವುದೇ ನಿರ್ದಿಷ್ಟ ವ್ಯಕ್ತಿಗಳ ಗುಂಪು ಅಥವಾ ಯಾವುದೇ ನಿರ್ದಿಷ್ಟ ಅರಣ್ಯ ಉತ್ಪನ್ನದ ಸಂಬಂಧದಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾದ ಅರಣ್ಯ ಅಭಿವೃದ್ಧಿ

ಶುಲ್ಕವನ್ನು ಉತ್ತರಾನ್ವಯವಾಗಿಯಾಗಲೀ ಅಥವಾ ಪೂರ್ವಾನ್ವಯವಾಗಿಯಾಗಲೀ ವಿನಾಯಿತಿಗೊಳಿಸಬಹುದು ಅಥವಾ ಕಡಿಮೆ ಮಾಡಬಹುದು.

(2) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಯಾವುದೇ ಅಧಿಸೂಚನೆಯನ್ನು ರದ್ದುಗೊಳಿಸಬಹುದು ಅಥವಾ ಬದಲಾಯಿಸಬಹುದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ನಿರ್ಬಂಧ ಅಥವಾ ಷರತ್ತನ್ನು ಒಬ್ಬ ವ್ಯಕ್ತಿಯು ಉಲ್ಲಂಘಿಸಿದಲ್ಲಿ ಅಥವಾ ಆತನು ಪಾಲಿಸದಿದ್ದಲ್ಲಿ ಅಥವಾ ಸದರಿ ಉಪಪ್ರಕರಣದ ಅಡಿಯಲ್ಲಿ ಒದಗಿಸಿದ ಘೋಷಣೆಯು ತಪ್ಪಾಗಿದೆ ಎಂದು ಕಂಡುಬಂದಲ್ಲಿ, ಆಗ ಅಂಥ ವ್ಯಕ್ತಿಯು ಅಧಿನಿಯಮದ ಮೂಲಕ ಅಥವಾ ಅದರಡಿ ನಿರ್ದಿಷ್ಟಪಡಿಸಿದ ದರಗಳಲ್ಲಿ ಸಂದಾಯ ಮಾಡಬೇಕಾದ ಶುಲ್ಕ, ಮತ್ತು ಯಾವ ಅರಣ್ಯ ಉತ್ಪನ್ನದ ಸಂಬಂಧದಲ್ಲಿ ಅಂಥ ಉಲ್ಲಂಘನೆ ಉಂಟಾಗಿದೆಯೋ ಅಥವಾ ಅನುಪಾಲನೆ ಆಗಿಲ್ಲವೋ ಅಥವಾ ತಪ್ಪಾದ ಘೋಷಣೆಯನ್ನು ಒದಗಿಸಲಾಗಿದೆಯೋ ಆ ಅರಣ್ಯ ಉತ್ಪನ್ನವನ್ನು ಪರಿಗಣಿಸಿದ ನಂತರ ಅಧಿಸೂಚನೆಯ ಅಡಿಯಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ಸಂದಾಯ ಮಾಡಿದ ಶುಲ್ಕದ ನಡುವಿನ ವ್ಯತ್ಯಾಸದ ಎರಡರಷ್ಟಕ್ಕೆ ಸಮನಾದ ಮೊತ್ತವನ್ನು ದಂಡದ ರೂಪದಲ್ಲಿ ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು:

ಪರಂತು, ಈ ಉಪಪ್ರಕರಣದ ಅಡಿಯಲ್ಲಿ ಕ್ರಮವನ್ನು ತೆಗೆದುಕೊಳ್ಳುವ ಮೊದಲು ಆ ವ್ಯಕ್ತಿಗೆ ಅಹವಾಲವನ್ನು ಹೇಳಿಕೊಳ್ಳುವ ಒಂದು ಯುಕ್ತ ಅವಕಾಶವನ್ನು ನೀಡತಕ್ಕದ್ದು.”

4. ಸಂದೇಹಗಳ ನಿವಾರಣೆಗಾಗಿ, ಈ ಅಧಿನಿಯಮದ ಮೂಲಕ ತಿದ್ದುಪಡಿಯಾದಂತೆ ಮೂಲ ಅಧಿನಿಯಮದ ಅಡಿಯಲ್ಲಿ ಅಥವಾ ಯಾವುವೇ ನಿಯಮಗಳು, ಅಧಿಸೂಚನೆ, ಆದೇಶ, ಪತ್ರ ಅಥವಾ ಮಾರ್ಗಸೂಚಿಗಳ ಅಡಿಯಲ್ಲಿ ಅರಣ್ಯ ಅಭಿವೃದ್ಧಿ ತೆರಿಗೆಯ ವಿಧಿಸುವಿಕೆ, ತೆರಿಗೆ ನಿರ್ಧರಣೆ ಮತ್ತು ಸಂಗ್ರಹಣೆಯನ್ನು ಅರಣ್ಯ ಅಭಿವೃದ್ಧಿ ಶುಲ್ಕವೆಂದು ಯಾವಾಗಲೂ ವಿಧಿಸಲಾಗಿದೆ ಮತ್ತು ವಸೂಲು ಮಾಡಲಾಗಿದೆ ಎಂದು ಭಾವಿಸತಕ್ಕದ್ದು, ಎಂದು ಈ ಮೂಲಕ ಘೋಷಿಸಲಾಗಿದೆ.

5. ಈ ಅಧಿನಿಯಮದ ಮೂಲಕ ಮಾಡಿದ ಪೂರ್ವಾನ್ವಯ ತಿದ್ದುಪಡಿಗಳ ಪರಿಣಾಮವಾಗಿ ಉಂಟಾಗಬಹುದಾದಂಥ ಮೂಲ ಅದಿನಿಯಮದ ಅಧ್ಯಾಯದ XIA ರ ಉಪಬಂಧಗಳ ಯಾವುದೇ ಉಲ್ಲಂಘನೆಗಾಗಿ ಯಾವೊಬ್ಬ ವ್ಯಕ್ತಿಯ ವಿರುದ್ಧ ಯಾವುದೇ ದಂಡ ವ್ಯವಹರಣೆಗಳನ್ನು ಪ್ರಾರಂಭಿಸತಕ್ಕದ್ದಲ್ಲ.

6. **ಅರಣ್ಯ ಅಭಿವೃದ್ಧಿ ತೆರಿಗೆ ಅಥವಾ ಶುಲ್ಕವಾಗಿ ಯಾವುದೇ ಮೊತ್ತದ ವಿಧಿಸುವಿಕೆಯನ್ನು ಮತ್ತು ಸಂಗ್ರಹಣೆಯನ್ನು ಸಿಂಧುಗೊಳಿಸುವುದು.–** ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಇತರ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಇದಕ್ಕೆ ವಿರುದ್ಧವಾಗಿ ಏನೇ ಒಳಗೊಂಡಿದ್ದರೂ, ಅರಣ್ಯ ಅಭಿವೃದ್ಧಿ ತೆರಿಗೆ ಅಥವಾ ಶುಲ್ಕವಾಗಿ ಅರಣ್ಯ ಉತ್ಪನ್ನದ ಮೇಲೆ ತೆರಿಗೆಯಾಗಿ ಅಥವಾ ಶುಲ್ಕವಾಗಿ ಯಾವುದೇ ಮೊತ್ತದ ವಿಧಿಸುವಿಕೆ, ತೆರಿಗೆ ನಿರ್ಧರಣೆ ಅಥವಾ ಸಂಗ್ರಹಣೆಗಾಗಿ ಕ್ರಮ ಕೈಗೊಂಡಿದೆ ಅಥವಾ ಕ್ರಮ ಕೈಗೊಳ್ಳಲಾಗಿದೆಯೆಂದು ತಾತ್ಪರ್ಯವಾಗುವ ಕ್ರಮದ ಹಾಗೂ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಮೂಲ ಅಧಿನಿಯಮ ಅಥವಾ ಯಾವುವೇ ನಿಯಮಗಳು, ಅಧಿಸೂಚನೆ, ಆದೇಶ, ಮಾರ್ಗಸೂಚಿಗಳು ಅಥವಾ ಪತ್ರಗಳ ಉಪಬಂಧಗಳ ಅಡಿಯಲ್ಲಿ ಅಂಥ ವಿಧಿಸುವಿಕೆ, ತೆರಿಗೆ ನಿರ್ಧರಣೆ ಅಥವಾ ಸಂಗ್ರಹಣೆಗೆ ಸಂಬಂಧಿಸಿದಂತೆ ತೆರಿಗೆ ಅಥವಾ ಶುಲ್ಕವಾಗಿ ಸಂಗ್ರಹಿಸಲಾಗಿದೆಯೆಂದು ತಾತ್ಪರ್ಯವಾಗುವ ತೆರಿಗೆ, ಶುಲ್ಕ ಅಥವಾ ಮೊತ್ತದ ಯಾವುದೇ ವಿಧಿಸುವಿಕೆ ಅಥವಾ ಸಂಗ್ರಹಣೆ ಹಾಗೂ ಕೈಗೊಂಡ ಅಥವಾ ಮಾಡಿದ (ನೀಡಲಾದ ಯಾವುವೇ ನೋಟೀಸುಗಳು ಅಥವಾ ಆದೇಶಗಳು ಅಥವಾ ಮಾಡಿದ ಕರ ನಿರ್ಧರಣೆಯನ್ನು ಒಳಗೊಂಡು) ಅಂಥ ವಿಧಿಸುವಿಕೆ, ತೆರಿಗೆ ನಿರ್ಧರಣೆ ಅಥವಾ ಸಂಗ್ರಹಣೆ ಅಥವಾ ಕ್ರಮ ಅಥವಾ ವಿಷಯವನ್ನು ಈ ಅಧಿನಿಯಮದ ಮೂಲಕ ತಿದ್ದುಪಡಿಯಾದಂತೆ ಮೂಲ ಅಧಿನಿಯಮದ ಅಡಿಯಲ್ಲಿ ಕ್ರಮ ಕೈಗೊಂಡಿದ್ದರೆ, ಕ್ರಮ ಕೈಗೊಳ್ಳಲಾಗಿದ್ದರೆ ಅಥವಾ ಮಾಡಿದ್ದರೆ ಹೇಗೋ ಹಾಗೆ ಎಲ್ಲಾ ಉದ್ದೇಶಗಳಿಗಾಗಿ ಸಿಂಧುವಾಗಿರತಕ್ಕದ್ದು ಮತ್ತು ಪರಿಣಾಮಕಾರಿಯಾಗಿರತಕ್ಕದ್ದು ಹಾಗೂ ಸಿಂಧುವಾಗಿದೆ ಮತ್ತು ಪರಿಣಾಮಕಾರಿಯಾಗಿದೆ ಎಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ:–

(ಎ) ಎಲ್ಲಾ ಉದ್ದೇಶಗಳಿಗಾಗಿ ಅರಣ್ಯ ಅಭಿವೃದ್ಧಿ ತೆರಿಗೆ ಅಥವಾ ಅರಣ್ಯ ಅಭಿವೃದ್ಧಿ ಶುಲ್ಕವಾಗಿ ಯಾವುದೇ ಮೊತ್ತದ ವಿಧಿಸುವಿಕೆ, ತೆರಿಗೆ ನಿರ್ಧರಣೆ ಅಥವಾ ಸಂಗ್ರಹಣೆಯ ಸಂಬಂಧದಲ್ಲಿ ಸರ್ಕಾರ ಅಥವಾ ಸಂದರ್ಭಾನುಸಾರ ಅರಣ್ಯ ಇಲಾಖಾ ಅಧಿಕಾರಿಗಳು ಮಾಡಿದ ಎಲ್ಲಾ ಕಾರ್ಯಗಳು, ವ್ಯವಹರಣೆಗಳು ಅಥವಾ ವಿಷಯಗಳನ್ನು ಅಥವಾ ತೆಗೆದುಕೊಂಡ ಯಾವುದೇ ಕ್ರಮವನ್ನು ಕಾನೂನಿನ ಪ್ರಕಾರವಾಗಿ ಮಾಡಲಾಗಿದೆ ಅಥವಾ ತೆಗೆದುಕೊಳ್ಳಲಾಗಿದೆ ಹಾಗೂ ಯಾವಾಗಲೂ ಮಾಡಿಕೊಂಡು ಬರಲಾಗಿದೆ ಎಂದು ಭಾವಿಸತಕ್ಕದ್ದು;

(ಬಿ) ಅಂಥ ತೆರಿಗೆ ಅಥವಾ ಶುಲ್ಕದ ಮರುಪಾವತಿಗಾಗಿ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣದಲ್ಲಿ ಅಥವಾ ಯಾವುದೇ ಪ್ರಾಧಿಕಾರದ ಮುಂದೆ ದಾವೆ ಅಥವಾ ಇತರ ವ್ಯವಹರಣೆಗಳನ್ನು ನಿರ್ವಹಿಸತಕ್ಕದ್ದಲ್ಲ ಅಥವಾ ಮುಂದುವರಿಸತಕ್ಕದ್ದಲ್ಲ; ಮತ್ತು

(ಸಿ) ಯಾವುದೇ ನ್ಯಾಯಾಲಯವು ಯಾವುದೇ ಅಂಥ ತೆರಿಗೆ ಅಥವಾ ಶುಲ್ಕದ ಮರುಪಾವತಿಯನ್ನು ನಿರ್ದೇಶಿಸಿ ಯಾವುದೇ ಡಿಕ್ರಿ ಅಥವಾ ಆದೇಶವನ್ನು ಜಾರಿಗೊಳಿಸತಕ್ಕದ್ದಲ್ಲ;

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

1. ಅರಣ್ಯ ಅಭಿವೃದ್ಧಿ ತೆರಿಗೆಯನ್ನು (ಎಫ್‌ಡಿಟಿ) ವಿಧಿಸುವುದರ ಸ್ವರೂಪ, ಪರಿಧಿ ಮತ್ತು ವ್ಯಾಪ್ತಿಗೆ ಸಂಬಂಧಿಸಿದ ಸಂದೇಹಗಳನ್ನು ನಿವಾರಿಸಲು ಕರ್ನಾಟಕ ಅರಣ್ಯ ಅಧಿನಿಯಮ, 1963ಕ್ಕೆ (1964ರ ಕರ್ನಾಟಕ ಅಧಿನಿಯಮ 05) (ಇಲ್ಲಿ ಇನ್ನುಮುಂದೆ ಅಧಿನಿಯಮ ಎಂದು ಕರೆಯಲಾಗಿದೆ) ಮತ್ತಷ್ಟು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಈ ಕೆಳಗೆ ವಿವರಿಸಲಾದಂತೆ, ಈ ತಿದ್ದುಪಡಿ ವಿಧೇಯಕದ ಉದ್ದೇಶಗಳನ್ನು 16ನೇ ಆಗಸ್ಟ್ 2008ರಿಂದ ಪೂರ್ವಾನ್ವಯಗೊಳಿಸಬೇಕಿದೆ, ಅವೆಂದರೆ:–
   - (i) 98ಎ ಪ್ರಕರಣದಲ್ಲಿ ಬರುವ "ರಾಜ್ಯ ಸರ್ಕಾರವು ಅಧಿಸೂಚಿಸಿದ ಒಂದು ನಿಕಾಯ" ಎಂಬ ಪದಗಳ ಅರ್ಥ ಮತ್ತು ಉದ್ದೇಶವನ್ನು ಘೋಷಿಸುವುದು;
   - (ii) ಲೆವಿಯ ಸ್ವರೂಪವನ್ನು ಪುನರ್‌–ರೂಪಿಸುವುದು ಮತ್ತು ಶುಲ್ಕದ ಸ್ವರೂಪದಲ್ಲಿ ಅದು ಇರುವುದೆಂಬುದನ್ನು ಘೋಷಿಸುವುದು;
   - (iii) 2008 ಮತ್ತು ನಂತರದಿಂದ ಅರಣ್ಯ ಅಭಿವೃದ್ಧಿ ತೆರಿಗೆ/ಅರಣ್ಯ ಅಭಿವೃದ್ಧಿ ಶುಲ್ಕದ ಸಂಗ್ರಹಣೆಯನ್ನು ಸಿಂಧುಗೊಳಿಸುವುದು.
2. ಅಧಿಸೂಚನೆ ಸಂಖ್ಯೆ: ಎಫ್‌ಇಇ 248 ಎಫ್‌ಡಿಪಿ 2006, ದಿನಾಂಕ:16.08.2008, ಬೆಂಗಳೂರು ಇದನ್ನು ಹೊರಡಿಸಿದಂದಿನಿಂದ, ಎಂದರೆ 16ನೇ ಆಗಸ್ಟ್ 2008ರಿಂದ ಪೂರ್ವಾನ್ವಯವಾಗಿ 98ಎ ಮತ್ತು 98ಬಿ ಪ್ರಕರಣಗಳಿಗೆ ತಿದ್ದುಪಡಿಗಳನ್ನು ಮಾಡಲಾಗಿದೆ. 98ಎ ಪ್ರಕರಣವು 24.12.1975ರಿಂದ ಜಾರಿಗೆ ಬಂದಿದ್ದಾಗ್ಯೂ, ಅರಣ್ಯ ಅಧಿನಿಯಮ, 1963ರ ಅಧ್ಯಾಯ–XI ಎ ಯಲ್ಲಿ ಬರುವ ಉದ್ಯಮಗಳಿಗೆ ಅನವಶ್ಯಕ ತೊಂದರೆಗಳಾಗುವುದನ್ನು ತಪ್ಪಿಸಲು ಈ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ ಮಾತ್ರ ಪೂರ್ವಾನ್ವಯವಾಗುವಂತೆ ಪ್ರಸ್ತುತ ತಿದ್ದುಪಡಿಗಳನ್ನು ಮಾಡಲಾಗಿದೆ.
3. ಅಧಿನಿಯಮದ 98ಎ ಪ್ರಕರಣವನ್ನು 1989ರ ತಿದ್ದುಪಡಿ ಅಧಿನಿಯಮ 10ರ ಮೂಲಕ "ರಾಜ್ಯ ಸರ್ಕಾರ ಅಥವಾ ಅದರ ಒಡೆತನ ಅಥವಾ ನಿಯಂತ್ರಣದಲ್ಲಿನ ಒಂದು ನಿಗಮವು ಅಥವಾ ರಾಜ್ಯ ಸರ್ಕಾರವು ಅಧಿಸೂಚಿಸಿದ ನಿಕಾಯವು" ಎಂಬ ಪದಗಳನ್ನು ಸೇರಿಸಲು ತಿದ್ದುಪಡಿ ಮಾಡಲಾಯಿತು. ಅಧಿನಿಯಮದ 98ಎ ಪ್ರಕರಣದ ಅಡಿಯಲ್ಲಿ ಲೆವಿಯ ವ್ಯಾಪ್ತಿ ಅಥವಾ ಪರಿಧಿಯೊಳಗೆ, ರಾಜ್ಯದ ಒಡೆತನದಲ್ಲಿನ ಮತ್ತು ನಿಯಂತ್ರಣದಲ್ಲಿನ ನಿಗಮಗಳು ಹಾಗೂ ಖಾಸಗಿ ವ್ಯಕ್ತಿಗಳು, ಫರ್ಮುಗಳು, ಕಂಪನಿಗಳು ಅಥವಾ ಯಾರೇ ಇತರರ ಉದ್ಯಮಗಳು ಒಳಗೊಂಡಂತೆ, ಮಾರಾಟ ಅಥವಾ ಅನ್ಯಥಾ ಮೂಲಕ ಅರಣ್ಯೋತ್ಪನ್ನವನ್ನು ವಿಲೆ ಮಾಡುತ್ತಿರುವ ಎಲ್ಲಾ ವ್ಯಕ್ತಿಗಳನ್ನು ಸೇರಿಸುವ ಉದ್ದೇಶದೊಂದಿಗೆ ಸದರಿ ತಿದ್ದುಪಡಿಯನ್ನು ಮಾಡಲಾಯಿತು. ರಾಜ್ಯದ ಒಡೆತನದಲ್ಲಿರದ ಅಥವಾ ರಾಜ್ಯದ ನಿಯಂತ್ರಣದಲ್ಲಿರದ ಎರಡನೇ ಪ್ರವರ್ಗವನ್ನು, 98ಎ (1)ನೇ ಪ್ರಕರಣದಲ್ಲಿ "ನಿಕಾಯ ಪದಾವಳಿಯೊಳಗೆ ಸೇರಿಸಬೇಕೆಂಬ ಉದ್ದೇಶವಿತ್ತು. ಅರಣ್ಯೋತ್ಪನ್ನದ ವಿಲೆಯ ಮೇಲೆ ಶುಲ್ಕವನ್ನು ವಿಧಿಸುವ ಮೂಲಕ 98ಬಿ ಪ್ರಕರಣದ ಅಡಿಯಲ್ಲಿ ಆಜ್ಞಾಪಕವಾದಂತೆ (mandated) "ವನ ನಿರ್ಮಾಣ"ದ ಪರಿಸರವನ್ನು ಉತ್ತಮಗೊಳಿಸುವ, ಮರಗಳನ್ನು ಹೆಚ್ಚಿಸುವ ಮತ್ತು ಅದಕ್ಕೆ ಪೂರಕವಾದ ಚಟುವಟಿಕೆಗಳ ಉದ್ದೇಶಕ್ಕಾಗಿ ರಾಜಸ್ವವನ್ನು ಹೆಚ್ಚಿಸುವ ಉದ್ದೇಶದಿಂದ ಇದನ್ನು ಮಾಡಲಾಗಿತ್ತು.
4. ಹೀಗಾಗಿ, ಮಾರಾಟದ ಅಥವಾ ಅನ್ಯಥಾ ಮೂಲಕ ಅರಣ್ಯೋತ್ಪನ್ನವನ್ನು ವಿಲೆ ಮಾಡುತ್ತಿರುವ, ರಾಜ್ಯದ ಒಡೆತನದಲ್ಲಿ, ರಾಜ್ಯದ ನಿಯಂತ್ರಣದಲ್ಲಿ ಇರುವ ಅಥವಾ ಇಲ್ಲದಿರುವ ಎಲ್ಲಾ ಘಟಕಗಳನ್ನು ಅರಣ್ಯ ಅಭಿವೃದ್ಧಿ ತೆರಿಗೆಯ (ಎಫ್‌ಡಿಟಿ) ಲೆವಿಯ ವ್ಯಾಪ್ತಿ ಅಥವಾ ಪರಿಧಿಯೊಳಗೆ ತರಲಾಗಿದೆ ಎಂದು ಯಾವಾಗಲೂ ಖಚಿತಪಡಿಸುವುದು ಶಾಸನದ ಉದ್ದೇಶವಾಗಿತ್ತು. ರಾಜ್ಯ ಸರ್ಕಾರ ಮತ್ತು ಅದರ ಉದ್ಯಮಗಳಿಗೆ ಮಾತ್ರ ಲೆವಿಯನ್ನು ಸಂಗ್ರಹಿಸುವುದು ಮತ್ತು ಪಾವತಿಸುವ ಶಾಸನಬದ್ಧ ಆಜ್ಞಾಪಕವನ್ನು ನಿರ್ಬಂಧಿಸುವುದು ಮತ್ತು ಎಲ್ಲಾ ಸರ್ಕಾರೇತರ ಉದ್ಯಮಗಳು ಮತ್ತು ಕೇಂದ್ರ ಸರ್ಕಾರದ ಉದ್ಯಮಗಳನ್ನೂ ಹೊರತುಪಡಿಸುವ ಯಾವುದೇ ಉದ್ದೇಶವಿರುವುದಿಲ್ಲ. ಉದ್ಯಮಗಳ ಜೊತೆಯಾಗಿ, ಒಂದು ಸಂಘವಾಗಿ ಅಥವಾ ಸಂಘಟಿತ ವ್ಯಾಪಾರಿ ಸಂಸ್ಥೆಯಾಗಿ (conglomeration) ಕಾರ್ಯನಿರ್ವಹಿಸಿದಾಗ ಮಾತ್ರವೇ ಅರಣ್ಯ ಅಭಿವೃದ್ಧಿ ತೆರಿಗೆಯನ್ನು ಸಂಗ್ರಹಿಸಬೇಕೆಂಬುದು ವಿಧಾನಮಂಡಲದ ಉದ್ದೇಶವಾಗಿರುವುದಿಲ್ಲ. ವಾಸ್ತವವಾಗಿ, ಅಂಥ ಒಂದು ಅರ್ಥ ವಿವರಣೆಯು, 98ಎ ಪ್ರಕರಣವನ್ನು ತಿದ್ದುಪಡಿ ಮಾಡುವ ಉದ್ದೇಶವನ್ನು ವಿಫಲಗೊಳಿಸುವುದಷ್ಟೇ ಅಲ್ಲದೇ ಕರ್ನಾಟಕ ರಾಜ್ಯದಲ್ಲಿ ಅರಣ್ಯಗಳ ಅಭಿವೃದ್ಧಿಗಾಗಿ ಮತ್ತು ಪುನರುತ್ಪಾದನೆಯ ಕಾರ್ಯಕ್ರಮಕ್ಕೆ ಗಂಭಿರವಾದ ವಿಪತ್ತನ್ನು ಉಂಟು ಮಾಡುತ್ತದೆ.

5. ಕರ್ನಾಟಕ ರಾಜ್ಯವು ಅಧಿನಿಯಮದ 98ಎ (1)ನೇ ಪ್ರಕರಣದ ಅಡಿಯಲ್ಲಿ ಅಧಿಸೂಚನೆ ಸಂಖ್ಯೆ: ಎಫ್‌ಇಇ 248 ಎಫ್‌ಡಿಪಿ 2006, ದಿನಾಂಕ:16.08.2008ನ್ನು ಹೊರಡಿಸಿದ್ದು ಅದರಲ್ಲಿ 98ಎ (1)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಅರಣ್ಯ ಪ್ರದೇಶದಲ್ಲಿ ಇರುವ ಗಣಿಗಳು ಮತ್ತು ಕ್ವಾರಿಗಳ ಎಲ್ಲಾ ಗುತ್ತಿಗೆದಾರರನ್ನು ಅಧಿಸೂಚಿಸಲಾಗಿತ್ತು. ರಿಟ್ ಪಿಟಿಷನ್ ಸಂಖ್ಯೆ 2009ರ 2462ರಲ್ಲಿ (ಮತ್ತು ಇತರ ಸಂಬಂಧಿತ ವಿಷಯಗಳು) ಕರ್ನಾಟಕ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ಮುಂದೆ ಅಧಿಸೂಚನೆಯ ಸಿಂಧುತ್ವ ಮತ್ತು ಕೆಲವ ಇತರ ವಿಷಯಗಳು ಪರಿಗಣನೆಗಾಗಿ ಬಂದಿತ್ತು ಮತ್ತು 3.12.2015ರಂದು ತೀರ್ಪು ನೀಡಲಾಗಿತ್ತು. ಮಾನ್ಯ ಉಚ್ಚ ನ್ಯಾಯಾಲಯವು, ಇತರ ವಿಷಯಗಳ ಜೊತೆಗೆ, "ಒಂದು ನಿಕಾಯ" ಪದಾವಳಿಯು ಒಬ್ಬ ವ್ಯಕ್ತಿಯಾಗಿರಲಿ ಅಥವಾ ಇತರ ನ್ಯಾಯಿಕ ಉದ್ಯಮ (juristic entity), ಗಣಿಗಳು ಮತ್ತು ಕ್ವಾರಿಗಳ ಗುತ್ತಿಗೆದಾರರು ಒಳಗೊಳ್ಳುವುದಿಲ್ಲ ಎಂಬ ಆಧಾರದ ಮೇಲೆ ಅಧಿಸೂಚನೆಯನ್ನು ರದ್ದುಗೊಳಿಸಲು ಇಚ್ಛಿಸಿತ್ತು. ಮಾನ್ಯ ಉಚ್ಚ ನ್ಯಾಯಾಲಯದ ಅನುಸಾರ, ಗುತ್ತಿಗೆದಾರರು, ವ್ಯಕ್ತಿಗಳಾಗಿರಬಹುದು, ಪಾಲುದಾರಿಕೆ ಫರ್ಮುಗಳಾಗಿರಬಹುದು, ಸೊಸೈಟಿಗಳಾಗಿರಬಹುದು, ಸಹಕಾರ ಸಂಘಗಳಾಗಿರಬಹುದು, ಕಂಪನಿಗಳ ಅಧಿನಿಯಮದ ಅಡಿಯಲ್ಲಿ ನಿಗಮಿತವಾದ ಕಂಪನಿಗಳಿರಬಹುದು ಅಥವಾ ಯಾವುದೇ ಇತರ ಸಂಘ ಅಥವಾ ವ್ಯಕ್ತಿಗಳಾಗಿರಬಹುದು. ಅವೆಲ್ಲವೂ ತಾವಾಗಿಯೇ "ಒಂದು ನಿಕಾಯ" ದೊಳಗೆ ರಚನೆಯಾಗದ ಹೊರತು, ಅನಿವಾರ್ಯವಾಗಿ ನ್ಯಾಯಿಕ ಘಟಕವಾಗುವ ಕಾನೂನು ವ್ಯಕ್ತಿಯನ್ನು ಹೊಂದಿರುವ ಗುತ್ತಿಗೆದಾರರು ಸದಸ್ಯರಾಗಿರುವ ಅಂಥ ಸಂಯುಕ್ತ ಸಂಘವಾಗಿ, ಅವರು ಷೇರುಹೋಲ್ಡರುಗಳಾಗಿರುವ ಕಂಪನಿ, ಅವರು ಸದಸ್ಯರಾಗಿರುವ ಒಂದು ಸೊಸೈಟಿ ಮತ್ತು ಅಂಥ ಸಂಯುಕ್ತ ಸಂಘ ಅಥವಾ ಕಂಪನಿ ಅಥವಾ ಸೊಸೈಟಿಯ ಚಟುವಟಿಕೆಗಳಲ್ಲಿ, ಮಾರಾಟ ಅಥವಾ ಅನ್ಯಥಾ ಮೂಲಕ ಅರಣ್ಯೋತ್ಪನ್ನವಾದ ಖನಿಜಗಳ ವಿಲೆಯು ಒಂದಾಗಿದ್ದಲ್ಲಿ ರಾಜ್ಯ ಸರ್ಕಾರದ ಮೂಲಕ ಅಧಿಸೂಚಿತವಾಗಬಹುದಾದ ನಿಕಾಯವೆಂದು ಅವುಗಳನ್ನು ಪರಿಗಣಿಸತಕ್ಕದ್ದಲ್ಲ, ಆದ್ದರಿಂದ, ಸ್ವತಂತ್ರ ಮತ್ತು ಪ್ರತ್ಯೇಕ ಗುತ್ತಿಗೆದಾರರು ಖಾಸಗಿ ವ್ಯಕ್ತಿಗಳಾಗಿರಲಿ ಅಥವಾ ಪಾಲುದಾರಿಕೆ ಸಂಸ್ಥೆಗಳಾಗಿರಲಿ ಅಥವಾ ಕಂಪನಿಗಳಾಗಿರಲಿ ಅಥವಾ ಯಾವುದೇ ಇತರ ನ್ಯಾಯಿಕ ಉದ್ಯಮವಾಗಿರಲಿ, ಅವರು ಅಧಿನಿಯಮದ 98-ಎ ಪ್ರಕರಣದ (1)ನೇ ಉಪ-ಪ್ರಕರಣದ ಅಡಿಯಲ್ಲಿ "ಒಂದು ನಿಕಾಯ" ಎಂಬ ಪದಾವಳಿಯ ಅರ್ಥವ್ಯಾಪ್ತಿಯೊಳಗೆ ಬರುವುದಾಗಿ ಅರ್ಥೈಸುವಂತಿಲ್ಲ. ಈ ಕಾರಣದಿಂದಾಗಿ, "ಅರಣ್ಯ ಅಭಿವೃದ್ಧಿ ತೆರಿಗೆ (ಎಫ್‌ಡಿಟಿ)ಯನ್ನು ಸಂದಾಯ ಮಾಡಲು ಹೊಣೆಗಾರರಾಗಿರದ ಅರಣ್ಯ ಪ್ರದೇಶದಲ್ಲಿರುವ ಗಣಿಗಳು ಮತ್ತು ಕ್ವಾರಿಗಳ ಅಸಂಖ್ಯಾತ ಗುತ್ತಿಗೆದಾರರಿಂದ ಅರಣ್ಯ ಅಭಿವೃದ್ಧಿ ತೆರಿಗೆಯನ್ನು ಸಂಗ್ರಹಿಸಲು ಸಾಧ್ಯವಾಗುತ್ತಿಲ್ಲ. ಇದು ಸ್ಪಷ್ಟವಾಗಿ ಎಂದಿಗೂ ಶಾಸನದ ಉದ್ದೇಶವಾಗಿರಲಿಲ್ಲ, ಏಕೆಂದರೆ, "ನಿಕಾಯ" ಪದವು, ವ್ಯಕ್ತಿಗಳಾಗಿರಲಿ ಅಥವಾ ಕಂಪನಿಗಳಾಗಿರಲಿ ಅಥವಾ ಸಂಸ್ಥೆಗಳಾಗಲಿ ಮತ್ತು ಅದೇ ರೀತಿ ಇರಲಿ, ಗುತ್ತಿಗೆದಾರರ ಸಂಘಟಿತ ವ್ಯಾಪಾರಿ ಸಂಸ್ಥೆಯನ್ನು ಒಳಗೊಂಡಿರುವ ಅಧಿಕಾರ ವ್ಯಾಪ್ತಿಯುಳ್ಳ ಉದ್ಯಮಗಳಿಗೆ ಮಾತ್ರ ಎಂದಿಗೂ ಅನ್ವಯಿಸುವ ಉದ್ದೇಶವನ್ನು ಹೊಂದಿರಲಿಲ್ಲ. ಅರಣ್ಯ ಪ್ರದೇಶದಲ್ಲಿರುವ ಗಣಿಗಳು ಮತ್ತು ಕ್ವಾರಿ ಗುತ್ತಿಗೆದಾರರು ಅರಣ್ಯ ಉತ್ಪನ್ನವನ್ನು ಖರೀದಿಸುವಾಗ ಅಥವಾ ಮಾರಾಟ ಮಾಡುವಾಗ ಅಥವಾ ವಿಲೆ ಮಾಡುವಾಗ ಸಂಘವಾಗಿ ಅಥವಾ ಸಂಘಟಿತ ವ್ಯಾಪಾರಿ ಸಂಸ್ಥೆಯಾಗಿ ಒಟ್ಟಿಗೆ ಕಾರ್ಯನಿರತರಾಗುವುದಿಲ್ಲ ಎಂಬುದು ಸಹ ಸ್ಪಷ್ಟ ವಿಷಯವಾಗಿದೆ.

6. ಆದುದರಿಂದ, ಪೂರ್ವಾನ್ವಯವಾಗಿ 98-ಎ ಪ್ರಕರಣವನ್ನು ತಿದ್ದುಪಡಿ ಮಾಡುವುದು ಹಾಗೂ 'ನಿಕಾಯ' ಎಂಬ ಪದವು, ಅರಣ್ಯ ಪ್ರದೇಶದಲ್ಲಿ ಇರುವ ಗಣಿಗಳು ಮತ್ತು ಕ್ವಾರಿಗಳ ಗುತ್ತಿಗೆದಾರರೂ ಸಹ, ಒಕ್ಕೂಟ, ಕಂಪನಿ ಅಥವಾ ಸೊಸೈಟಿ ಅಥವಾ ವ್ಯಕ್ತಿಗಳ ಸಂಘವಾಗಿ, ಅವರೆಲ್ಲರೂ ಒಟ್ಟಿಗೆ ಸೇರದಿದ್ದರೂ ಸಹ, ಅರಣ್ಯ ಪ್ರದೇಶದಲ್ಲಿರುವ ಗಣಿಗಳು ಮತ್ತು ಕ್ವಾರಿಗಳ ಗುತ್ತಿಗೆದಾರರನ್ನು ಒಳಗೊಳ್ಳುತ್ತದೆ ಮತ್ತು ಯಾವಾಗಲೂ ಒಳಗೊಂಡಿದೆ ಎಂದು ಘೋಷಿಸುವುದು ಅವಶ್ಯಕವಾಗಿದೆ. ಮುಖ್ಯವಾಗಿ, ಮಾನ್ಯ ಉಚ್ಚ ನ್ಯಾಯಾಲಯವು, "ನಿಕಾಯ" ಎಂಬ ಪದಾವಳಿಯು ರಾಜ್ಯ ಸರ್ಕಾರವು ಯಾವ ರೀತಿಯಲ್ಲೇ ಆಗಲಿ ಯಾವುದೇ ನಿಯಂತ್ರಣವನ್ನು ಹೊಂದಿರದ ಯಾವುದೇ ಸ್ವಾಯತ್ತ ಅಥವಾ ಖಾಸಗಿ ನಿಕಾಯವನ್ನು ಒಳಗೊಳ್ಳುತ್ತದೆ ಎಂಬ ಈ ಅಭಿಪ್ರಾಯವನ್ನು ಅಂಗೀಕರಿಸಿದೆ. ಪ್ರಸ್ತಾವಿತ ತಿದ್ದುಪಡಿಗಳು, ಅರಣ್ಯ ಪ್ರದೇಶದಲ್ಲಿನ ಗಣಿಗಳು ಮತ್ತು ಕ್ವಾರಿಗಳ ಎಲ್ಲಾ ಗುತ್ತಿಗೆದಾರರು "ನಿಕಾಯ" ಪರಿಭಾಷೆಯ ಒಳಗೆ ಬರುವರೆಂದು ಮತ್ತು ಈ ಲೆವಿಯು ಅರಣ್ಯಗಳ ಅಭಿವೃದ್ಧಿ ಮತ್ತು ಪುನರುತ್ಪಾದನೆಗೆ ನಿರ್ಣಾಯಕವಾಗಿರುವುದರಿಂದ ಅರಣ್ಯ ಅಭಿವೃದ್ಧಿ ತೆರಿಗೆ ಅಥವಾ ಅರಣ್ಯ ಅಭಿವೃದ್ಧಿ ಶುಲ್ಕವನ್ನು ಸಂಗ್ರಹಿಸಲು ಮತ್ತು ಸಂದಾಯ ಮಾಡಲು ಅವರು ಹೊಣೆಗಾರರಾಗಿರುತ್ತಾರೆಂದು ಘೋಷಿಸಲು ಉದ್ದೇಶಿಸಿದೆ. ಪ್ರಸ್ತಾವಿತ ತಿದ್ದುಪಡಿಗಳು ಅಸ್ಥಿರತೆಯನ್ನು ಹೋಗಲಾಡಿಸಿ, ಪ್ರಸ್ತುತ ಇರುವ ಉಪಬಂಧಗಳಲ್ಲಿ ಕಂಡುಬಂದಂಥ ಲೋಪದೋಷಗಳನ್ನು ತೆಗೆದುಹಾಕಿದೆ.

ವಿಧೇಯಕವು ಸಿಂಧುತ್ವ ಖಂಡವನ್ನು ಸಹ ಒಳಗೊಂಡಿದ್ದು, ಅದರೊಂದಿಗೆ ತರುವಾಯದಲ್ಲಿ ವ್ಯವಹರಿಸಲಾಗುವುದು.

**ತೆರಿಗೆ ಮತ್ತು ಶುಲ್ಕ:**

7. ಗುರುಸಿದ್ಧಪ್ಪ ವಿರುದ್ಧ ಕರ್ನಾಟಕ ರಾಜ್ಯ, ಎಐಆರ್ 1981 ಕೆಎಆರ್ 216 ಮೊಕದ್ದಮೆಯಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠವು, ಅರಣ್ಯ ಉತ್ಪನ್ನದ ಖರೀದಿ ದರದ ಮೇಲೆ ವಿಧಿಸಲಾದ ಎಫ್‌ಡಿಟಿಯು ಪಟ್ಟಿ–IIರ 54ನೇ ನಮೂದಿನ ಅಡಿಯಲ್ಲಿ ರಾಜ್ಯದ ವಿಧಾಯೀ ಸಕ್ಷಮತೆ ಒಳಗೆ ಇದೆ ಮತ್ತು ಶಾಸನಬದ್ಧವಾಗಿ ಸಿಂಧುವಾಗಿದೆ ಎಂದು ತೀರ್ಪು ನೀಡಿದೆ. ಆದಾಗ್ಯೂ, ತಿದ್ದುಪಡಿಯಾಗದ 98ಎ(1)ನೇ ಪ್ರಕರಣವು ತೆರಿಗೆಯನ್ನು ವಿಧಿಸುವುದನ್ನು ಅದು ಶುಲ್ಕದ ಸ್ವರೂಪದಲ್ಲಿದೆ ಎಂದು ಹೇಳುತ್ತದೆ. ಅರಣ್ಯ ಅಭಿವೃದ್ಧಿ ತೆರಿಗೆಯ ರೂಪದಲ್ಲಿ ಸಂಗ್ರಹಿಸಲಾದ ಮೊತ್ತವನ್ನು ಅರಣ್ಯದ ಅಭಿವೃದ್ಧಿಗೆ ಮತ್ತು ಪುನರುತ್ಪಾದನೆ ಮೀಸಲಿರಿಸಲಾಗಿದೆ ಹಾಗೂ ಸಾರ್ವಜನಿಕ ಉದ್ದೇಶಕ್ಕಾಗಿ ಖರ್ಚು ಮಾಡಬೇಕಾದ ರಾಜ್ಯದ ಸಾಮಾನ್ಯ ರಾಜಸ್ವಕ್ಕೆ ಹೋಗುತ್ತಿಲ್ಲ. ಇದನ್ನು ಅಧಿನಿಯಮದ 98ಬಿ ಪ್ರಕರಣವು ಸಹ ಸ್ಪಷ್ಟಪಡಿಸುತ್ತದೆ, ಎಂದರೆ, ಅದು ಎಫ್‌ಡಿಟಿ ಮತ್ತು ವಿಧಿಸಲಾದಂಥ ಬಡ್ಡಿ ಮತ್ತು 98ಎ ಪ್ರಕರಣದ ಅಡಿಯಲ್ಲಿನ ತೆರಿಗೆ ಸಂಗ್ರಹವು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಧಿಯ ಭಾಗವಾಗಿ ರೂಪುಗೊಳ್ಳುತ್ತದೆ ಎಂಬುದನ್ನು ನಿರ್ದಿಷ್ಟಪಡಿಸುತ್ತದೆ. ಎಫ್‌ಡಿಟಿ ಮತ್ತು 98ಬಿ(2)ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಇತರ ಮೊತ್ತಗಳು ರಾಜ್ಯದ ಕ್ರೋಢೀಕೃತ ನಿಧಿಗೆ ಜಮೆಯಾಗುತ್ತಿದ್ದಾಗ್ಯೂ, ತರುವಾಯದಲ್ಲಿ ಅದನ್ನು ಮೇಲೆ ಹೇಳಲಾದ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಧಿಗೆ ವರ್ಗಾಯಿಸಲಾಗುತ್ತದೆ.

8. ಮಹಾರಾಷ್ಟ್ರ ಸರ್ಕಾರ ವಿರುದ್ಧ ಸಾಲ್ವೇಷನ್ ಆರ್ಮಿ ಎಐಆರ್ 1975 ಎಸ್‌ಸಿ 846 ಮೊಕದ್ದಮೆಯಲ್ಲಿ, ಸರ್ವೋಚ್ಚ ನ್ಯಾಯಾಲಯವು, ಪ್ರಾರಂಭದಲ್ಲಿ ಶುಲ್ಕದ ರೂಪದಲ್ಲಿರುವ ಶುಲ್ಕವನ್ನು ತರುವಾಯದಲ್ಲಿ ತೆರಿಗೆ ಲಕ್ಷಣಗಳಿರುವುದಾಗಿ ಭಾವಿಸಬಹುದೆಂದು ತೀರ್ಪು ನೀಡಿದೆ. ಪರಿವರ್ತನೆಯ ಸಹ ನಿಜವಾದುದಾಗಿದೆ. ಕರ್ನಾಟಕ ಉಚ್ಚ ನ್ಯಾಯಾಲಯದ ನಿರ್ಣಯವನ್ನು 1981ರಲ್ಲಿ ನೀಡಲಾಗಿದ್ದು, ಎಫ್‌ಡಿಟಿಯನ್ನು ಪಟ್ಟಿ–IIರ 54ನೇ ನಮೂದಿನ ಅಡಿಯಲ್ಲಿ ಬರುವ ತೆರಿಗೆ ಎಂದು ಪರಿಗಣಿಸಲಾಗಿದೆ.

9. ಎಫ್‌ಡಿಟಿಯು ಶುಲ್ಕವಾಗಿರುವುದರಿಂದ, ಅರಣ್ಯ ಉತ್ಪನ್ನಗಳ ಮಾರಾಟ ಅಥವಾ ಅನ್ಯಥಾ ರೂಪದಲ್ಲಿ ವಿಲೇ ಮಾಡುವ ಸಮಯದಲ್ಲಿ ವಿಧಿಸಲಾಗುವುದು, ಈ ಶುಲ್ಕವನ್ನು, ಸಂವಿಧಾನದ VIIನೇ ಅನುಸೂಚಿಯ ಪಟ್ಟಿ–IIರ 66ನೇ ನಮೂದಿನ ಅಡಿಯಲ್ಲಿ ರಾಜ್ಯ ವಿಧಾಯೀ ಅಧಿಕಾರಗಳನ್ನು ಚಲಾಯಿಸಿ ವಿಧಿಸಲಾಗುವುದು. ಕಲ್ಕತ್ತ ಮಹಾನಗರ ಪಾಲಿಕೆ ವಿರುದ್ಧ ಲಿಬರ್ಟಿ ಸಿನೆಮಾಸ್ ಎಐಆರ್ 1965 ಎಸ್‌ಸಿ 1107 ಮೊಕದ್ದಮೆಯಲ್ಲಿ, ಮಾನ್ಯ ಸರ್ವೋಚ್ಚ ನ್ಯಾಯಾಲಯವು, ಶುಲ್ಕವು ತೆರಿಗೆಯನ್ನು ವಿಧಿಸುವುದಕ್ಕೆ ಸಂಬಂಧಪಡಬಹುದಾದ ಅಧಿನಿಯಮಿತಿಯ ಅಡಿಯಲ್ಲಿ ಸಹ ಇರಬಹುದಾಗಿದೆ ಎಂದು ತೀರ್ಪು ನೀಡಿದೆ. ಯಾವುದೇ ಸಂದರ್ಭದಲ್ಲೂ, ಪಟ್ಟಿ–IIIರ 47ನೇ ನಮೂದಿನ ಅಡಿಯಲ್ಲಿ ಅಂಥ ಶುಲ್ಕವನ್ನು ವಿಧಿಸಲು ರಾಜ್ಯ ಸರ್ಕಾರವು ಸಕ್ಷಮವಾಗಿದೆ.

**ಸಿಂಧುತ್ವ:**

10. 1 ರಾಜ್ಯ ಸರ್ಕಾರವು ಆಕ್ಷೇಪಿತ ಅಧಿಸೂಚನೆಯನ್ನು 2008ರಲ್ಲಿ ಹೊರಡಿಸಿದ ತರುವಾಯ ಎಫ್‌ಡಿಟಿಯಾಗಿ 3500 ಕೋಟಿ ರೂಪಾಯಿಗಳಿಗಿಂತ ಹೆಚ್ಚು ಮೊತ್ತವನ್ನು ವಿಧಿಸಿದೆ ಮತ್ತು ಸಂಗ್ರಹಿಸಿದೆ. ಮೇಲಿನ ತೀರ್ಪಿನಲ್ಲಿನ ಎಲ್ಲ ಅರ್ಜಿದಾರರು 2011ರವರೆಗಿನ ಲೆವಿಯ ಬಗ್ಗೆ ಮಾತ್ರ ತಾವು ವಿವಾದ ಹೊಂದಿರುವರೆಂಬುದನ್ನು ಒಪ್ಪಿದ್ದಾರೆ. ಆದಾಗ್ಯೂ, ಅರಣ್ಯ ಪ್ರದೇಶದಲ್ಲಿರುವ ಗಣಿಗಳ ಮತ್ತು ಕ್ವಾರಿಗಳ ಗುತ್ತಿಗೆದಾರರು ಮತ್ತು ಮೇಲ್ವಿಚಾರಣಾ ಸಮಿತಿಗಳಿಬ್ಬರೂ, ಇಂದಿನವರೆಗಿನ ಖನಿಜಗಳ ಖರೀದಿದಾರರಿಂದ ಮಾಡಿದ ಅಂಥ ಸಂಗ್ರಹಣೆಗಳನ್ನು ಸಿಂಧುಗೊಳಿಸಲು ಪ್ರಸ್ತಾಪಿಸಲಾಗಿದೆ. ಪ್ರಸ್ತುತ ವಿಧೇಯಕವು ಮೇಲೆ ಹೇಳಲಾದ ಉದ್ದೇಶಗಳನ್ನು ಸಾಧಿಸಲು ಹಾಗೂ ಎಫ್‌ಡಿಟಿಯನ್ನು ವಿಧಿಸುವ ಮತ್ತು ಸಂಗ್ರಹಿಸುವ ಸಿಂಧುತ್ವಕ್ಕಾಗಿ ಉಪಬಂಧ ಕಲ್ಪಿಸಲು ಉದ್ದೇಶಿಸುತ್ತದೆ. ವಿಧೇಯಕದ 6ನೇ ಖಂಡವು, ಇತರ ವಿಷಯಗಳ ಜೊತೆಗೆ, ಈ ತಿದ್ದುಪಡಿ ವಿಧೇಯಕಕ್ಕೆ ಮೊದಲು ಅಸ್ತಿತ್ವದಲ್ಲಿದ್ದಂಥ ಅಧಿನಿಯಮದ ಉಪಬಂಧಗಳ ಅಡಿಯಲ್ಲಿನ ಯಾವುದೇ ಬೇಡಿಕೆ ಮತ್ತು/ಅಥವಾ ತೆಗೆದುಕೊಂಡ ಯಾವುದೇ ಕ್ರಮವನ್ನು, ತಿದ್ದುಪಡಿಯ ನಂತರದ ಹೊಸ ಕಾನೂನಿನ ಅಡಿಯಲ್ಲಿ ತೆಗೆದುಕೊಂಡದ್ದು ಅಥವಾ ವಿಧಿಸಲಾದದ್ದೆಂದು ಭಾವಿಸತಕ್ಕದ್ದು ಎಂಬ ಉಪಬಂಧವನ್ನು ಕಲ್ಪಿಸುತ್ತದೆ. ತಿದ್ದುಪಡಿಯಾದ ಕಾನೂನಿನ ಅಡಿಯಲ್ಲಿ ಮಾಡಲಾಗಿದೆಯೆಂದು ಭಾವಿಸುವ ಮೂಲಕ ಮಾಡಿದ ಬೇಡಿಕೆಯನ್ನು ಇದು ಸಿಂಧುತ್ವಗೊಳಿಸುವುದು ಮತ್ತು ಹೀಗೆ ರಾಜ್ಯದ ರಾಜಸ್ವವನ್ನು ಸಂರಕ್ಷಿಸುತ್ತದೆ. ಆದ್ದರಿಂದ ಈ ವಿಧೇಯಕವು ಅಸ್ಥಿರತೆಯನ್ನು ಹೋಗಲಾಡಿಸಿ, ಈಗಿರುವ ಉಪಬಂಧಗಳಲ್ಲಿ ಕಂಡುಬರುವ

ಲೋಪದೋಷಗಳನ್ನು ತೆಗೆದುಹಾಕುತ್ತದೆ ಹಾಗೂ ಅರಣ್ಯ ಅಭಿವೃದ್ಧಿ ತೆರಿಗೆ ಮತ್ತು ಅರಣ್ಯ ಅಭಿವೃದ್ಧಿ ಶುಲ್ಕದ ಕಾನೂನುಬದ್ಧ ವಿಧಿಸುವಿಕೆಗೆ ಸಿಂಧುತ್ವ ಖಂಡದಲ್ಲಿ ಸಾಕಷ್ಟು ಉಪಬಂಧಗಳನ್ನು ಕಲ್ಪಿಸುತ್ತದೆ.

10.2 ನಿಯಮಿಸಲಾದ ನಿಯಮಗಳು ಅಥವಾ ಮಾರ್ಗಸೂಚಿಗಳ ಪ್ರಕಾರ ಅರಣ್ಯ ಅಭಿವೃದ್ಧಿ ಶುಲ್ಕವನ್ನು ಪುನಃ ಲೆಕ್ಕಹಾಕಲು ರಾಜ್ಯ ಸರ್ಕಾರವು ಉದ್ದೇಶಿಸುತ್ತದೆ. ಹೊಸ ನಿಯಮಗಳು ಅಥವಾ ಮಾರ್ಗಸೂಚಿಗಳ ಪ್ರಕಾರ ಲೆಕ್ಕಹಾಕಲಾದ ಬೇಡಿಕೆಯು, ಮೊದಲಿನ 98ಎ ಪ್ರಕರಣದ ಅಥವಾ ಅದರಡಿ ಹೊರಡಿಸಿದ ಯಾವುದೇ ಅಧಿಸೂಚನೆಯ ಅಡಿಯಲ್ಲಿನ ಅರಣ್ಯ ಅಭಿವೃದ್ಧಿ ಶುಲ್ಕ ಬೇಡಿಕೆಯ ಮೊತ್ತಕ್ಕಿಂತ ಕಡಿಮೆಯಾಗಿದ್ದರೆ ಕಡಿಮೆಯಾದ ಮೊತ್ತವನ್ನು ಅರಣ್ಯ ಅಭಿವೃದ್ಧಿ ಶುಲ್ಕವಾಗಿ ಸಂದಾಯನೀಯವಾಗುವುದು.

10.3 ಯಾವುದೇ ನಿರ್ದಿಷ್ಟ ವ್ಯಕ್ತಿಗಳ ವರ್ಗದ ಮೂಲಕ ಅಥವಾ ಯಾವುದೇ ನಿರ್ದಿಷ್ಟ ಅರಣ್ಯ ಉತ್ಪನ್ನದ ಸಂಬಂಧದಲ್ಲಿ, ಸಾರ್ವಜನಿಕ ಹಿತಾಸಕ್ತಿಯಲ್ಲಿ, ಉತ್ತರಾನ್ವಯವಾಗಿ ಅಥವಾ ಪೂರ್ವಾನ್ವಯವಾಗಿ, ಅಧಿಸೂಚನೆಯ ಮೂಲಕ ಸರ್ಕಾರವು ಅರಣ್ಯ ಅಭಿವೃದ್ಧಿ ತೆರಿಗೆ (ಎಫ್‌ಟಿಡಿ) ಅಥವಾ ಅರಣ್ಯ ಅಭಿವೃದ್ಧಿ ಶುಲ್ಕವನ್ನು ವಿನಾಯಿತಿಗೊಳಿಸಲು ಅಥವಾ ಕಡಿಮೆ ಮಾಡಲು ಕೂಡ ಒಂದು ಉಪಬಂಧವನ್ನು ಪ್ರಸ್ತಾವಿಸಲಾಗಿದೆ.

**ದಂಡ:**

11. ಯಾವುದೇ ದಂಡದ ವ್ಯವಹರಣೆಗಳು ವಿಧೇಯಕದಲ್ಲಿ ಪ್ರಸ್ತಾವಿಸಿದಂಥ ಪೂರ್ವಾನ್ವಯ ತಿದ್ದುಪಡಿಗಳ ಪರಿಣಾಮವಾಗಿ ಬಂದಿರುವುದಿಲ್ಲವೆಂದು ಇದು ಸ್ಪಷ್ಟಪಡಿಸುತ್ತದೆ. ಇದು ಸಂವಿಧಾನದ 20(1)ನೇ ಅನುಚ್ಛೇದ ಅನುಪಾಲನೆಯನ್ನು ಸಹ ಸುನಿಶ್ಚಿತಗೊಳಿಸುತ್ತದೆ.

**ತೆರಿಗೆ ಅಥವಾ ಶುಲ್ಕದ ದರ:**

12. ಖನಿಜಗಳ ವಿಲೆಯ ಮೇಲೆ ಶೇಕಡ 12ರ ದರದಲ್ಲಿ ಬೇಡಿಕೆಯು ಹೆಚ್ಚಾಗಿದ್ದಾಗ್ಯೂ, ಹಿಂದಿನ ಉಪಬಂಧಗಳಲ್ಲಿ ಮತ್ತು ಅದಕ್ಕೆ ಸಂಬಂಧಿಸಿದ ಕೋಷ್ಟಕದಲ್ಲಿ ಹೇಳಲಾಗಿರುವುದನ್ನು ಹೊರತುಪಡಿಸಿ 98ಎ(1) ಪ್ರಕರಣವು ಅರಣ್ಯ ಉತ್ಪನ್ನದ ಮೇಲೆ ಶೇಕಡ 8ರಷ್ಟು ತೆರಿಗೆ ದರವನ್ನು ನಿಗದಿಪಡಿಸುತ್ತದೆ. ಕರ್ನಾಟಕ ಅರಣ್ಯ (ತಿದ್ದುಪಡಿ) ಅಧಿನಿಯಮ, 2015 ಇದು ಶೇಕಡ 12ರಷ್ಟು ಲೆವಿಯನ್ನು ವಿಧಿಸುತ್ತದೆಯಾದರೂ, ಪೂರ್ವಾನ್ವಯವಾಗಿ ದರವನ್ನು ತಿದ್ದುಪಡಿ ಮಾಡುವುದನ್ನು ಬಿಟ್ಟುಬಿಟ್ಟಿದೆ. 16ನೇ ಆಗಸ್ಟ್ 2008ರಿಂದ ಪೂರ್ವಾನ್ವಯವಾಗಿ ಶೇಕಡ 8ನ್ನು ಶೇಕಡ 12ಕ್ಕೆ ಹೆಚ್ಚಿಸಲಾಗಿದೆ ಎಂಬುದು ಈಗ ಸ್ಪಷ್ಟವಾಗಿದೆ. ಆದಾಗ್ಯೂ, 16ನೇ ಆಗಸ್ಟ್ 2008ರಿಂದ ಈ ದರದಲ್ಲಿ ಬೇಡಿಕೆಗಳನ್ನು ಮಾಡಲಾಗಿದೆ.

13. 02.09.2011 ಮತ್ತು 23.9.2011ರ ಆದೇಶದ ಮೂಲಕ, ಸರ್ವೋಚ್ಚ ನ್ಯಾಯಾಲಯವು 2009ರ ರಿಟ್ ಅರ್ಜಿ(ಸಿ) 562ರಲ್ಲಿ, ಮೇಲ್ವಿಚಾರಣಾ ಸಮಿತಿಯು "ಅನ್ವಯವಾಗುವಂತೆ" ಎಫ್‌ಡಿಟಿ ಸಂಗ್ರಹಿಸತಕ್ಕದ್ದೆಂದು ನಿರ್ದೇಶಿಸಿದೆ. ಅದಕ್ಕನುಸಾರವಾಗಿ, ಅರಣ್ಯ ಪ್ರದೇಶದಲ್ಲಿನ ಗುತ್ತಿಗೆಗಳಿಂದ ಹೊರತೆಗೆದ ಕಬ್ಬಿಣದ ಅದಿರನ ಎಲ್ಲ ಖರೀದಿದಾರರು (2009ರ ರಿಟ್ ಅರ್ಜಿ ಸಂ. 2642ರಲ್ಲಿ ಮತ್ತು ಇತರ ಸಂಬಂಧಪಟ್ಟ ವಿಷಯಗಳಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದಿರುವ ಅರ್ಜಿದಾರರನ್ನು ಒಳಗೊಂಡು), ಯಾವುದೇ ಪ್ರತಿಭಟನೆ ಅಥವಾ ಆಕ್ಷೇಪಣೆಗಳಿಲ್ಲದೆ ಮೇಲ್ವಿಚಾರಣಾ ಸಮಿತಿಗೆ ಶೇಕಡ 12ರ ದರದಲ್ಲಿ ಎಫ್‌ಡಿಟಿಯನ್ನು ಸಂದಾಯ ಮಾಡಿರುವರು. ಎಫ್‌ಡಿಟಿಯು ಅನ್ವಯವಾಗುವ ದರವು ಶೇಕಡ 12 ಅಲ್ಲ ಶೇಕಡ 8 ಎಂದು ಸ್ಪಷ್ಟೀಕರಣ ಕೋರಲು ಯಾವುದೇ ಅರ್ಜಿಯನ್ನು ಯಾವಾಗಲೂ ಸಲ್ಲಿಸಲಾಗಿಲ್ಲ. ಅದಕ್ಕನುಸಾರವಾಗಿ ಎಫ್‌ಡಿಟಿಯನ್ನು ಶೇಕಡ 12 ಎಂಬುದಾಗಿ ಏಕರೂಪವಾಗಿ ಅಂಗೀಕರಿಸಲಾಗಿದೆ. ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದಿರುವ ಅರ್ಜಿದಾರರು ಸಹ 23.09.2011ಕ್ಕೆ ಮೊದಲಿನ ಅವಧಿಗೆ ಮಾತ್ರ ಅವರ ಕ್ಲೇಮನ್ನು ಪರಿಮಿತಿಗೊಳಿಸಿದ್ದಾರೆ. ಹಾಗಾಗಿ, ಅರಣ್ಯ ಅಭಿವೃದ್ಧಿ ತೆರಿಗೆ/ಅರಣ್ಯ ಅಭಿವೃದ್ಧಿ ಶುಲ್ಕದ ದರವನ್ನು 16ನೇ ಆಗಸ್ಟ್ 2008ರಿಂದ ಶೇಕಡ 12 ಇರಬೇಕು ಎಂಬುದಾಗಿ ಪೂರ್ವಾನ್ವಯವಾಗಿ ತಿದ್ದುಪಡಿ ಮಾಡಲಾಗಿದೆ.

**ಅರಣ್ಯ ಅಭಿವೃದ್ಧಿ ಶುಲ್ಕವನ್ನು ಲೆಕ್ಕಹಾಕುವುದಕ್ಕಾಗಿ ಇರುವ ನಿಯಮಗಳು:**

14. ಅರಣ್ಯ ಅಭಿವೃದ್ಧಿ ಶುಲ್ಕವನ್ನು ಲೆಕ್ಕಹಾಕುವುದಕ್ಕಾಗಿ ಇರುವ ನಿಯಮಗಳು ಅಥವಾ ಮಾರ್ಗಸೂಚಿಗಳನ್ನು ಸಹ ಅಂತಿಮಗೊಳಿಸಲಾಗಿದೆ. ಈ ನಿಯಮಗಳು 16ನೇ ಆಗಸ್ಟ್ 2008ರಿಂದ ಪೂರ್ವಾನ್ವಯವಾಗಿ ಅನ್ವಯವಾಗುತ್ತವೆ. ಅದಕ್ಕನುಸಾರವಾಗಿ ಪೂರ್ವಾನ್ವಯ ಪರಿಣಾಮದೊಂದಿಗೆ ಅಂಥ ನಿಯಮಗಳನ್ನು ಸೇರಿಸುವುದನ್ನು ವಿಧೇಯಕದ 3ನೇ ಖಂಡವು ಸಾಧ್ಯವನ್ನಾಗಿಸುತ್ತದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ: 2009ರ 2462ರಲ್ಲಿ ಮತ್ತು ದಿನಾಂಕ:03.12.2016ರ ಅವರ ಆದೇಶದ ಮೂಲಕ ಇತರ ಸಂಬಂಧಪಟ್ಟ ವಿಷಯಗಳಲ್ಲಿ ಅಧಿಸೂಚನೆ ಸಂಖ್ಯೆ: ಎಫ್‌ಇಇ 248 ಎಫ್‌ಡಿಪಿ 2006ನ್ನು ರದ್ದುಗೊಳಿಸಿದೆ ಮತ್ತು ಪ್ರಶ್ನಿತ ಅಧಿಸೂಚನೆಯ ಆಧಾರದ ಮೇಲೆ ಅರಣ್ಯ ಅಭಿವೃದ್ಧಿ ತೆರಿಗೆಯಾಗಿ ಸಂಗ್ರಹಿಸಿರುವ ಮೊತ್ತವನ್ನು ಮರುಪಾವತಿ ಮಾಡಿಕೊಡಲು ನಿರ್ದೇಶಿಸಿದೆ. ಮಾನ್ಯ ಉಚ್ಚ ನ್ಯಾಯಾಲಯದ ಆದೇಶವನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯದ ಮುಂದಿರುವ ಎಸ್‌ಎಲ್‌ಪಿ ಮೂಲಕ ಪ್ರಶ್ನಿಸಲಾಗಿದೆ. ಮೊಕದ್ದಮೆಯು ಇತ್ಯರ್ಥದಲ್ಲಿರುವ ಅವಧಿಯಲ್ಲಿ ಪ್ರಸ್ತುತ ತಿದ್ದುಪಡಿಯನ್ನು ಕಾನೂನಿನಲ್ಲಿರುವ ಕೊರತೆಗಳನ್ನು ಸರಿಪಡಿಸುವ ಮತ್ತು ಕಾನೂನಿನ ಉದ್ದೇಶವನ್ನು ಸ್ಪಷ್ಟಪಡಿಸುವ ಮೂಲಕ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದ ಆಧಾರವನ್ನು ತೆಗೆದುಹಾಕುವುದಕ್ಕಾಗಿ ಪ್ರಸ್ತಾವಿಸಲಾಗಿದೆ. ಈಗಾಗಲೇ ಸಂಗ್ರಹಿಸಿದ ಸುಮಾರು 3640 ಕೋಟಿ ರೂಪಾಯಿಗಳ ಮೊತ್ತವನ್ನು ರಕ್ಷಿಸಿಕೊಳ್ಳಲು ಇದು ಒಂದೇ ಮಾರ್ಗ ಉಳಿದಿದೆ. ಈ ತಿದ್ದುಪಡಿಯು 3640 ಕೋಟಿ ರೂಪಾಯಿಗಳ ಮೊತ್ತವನ್ನು ಉಳಿಸಿಕೊಳ್ಳುವುದು ಮಾತ್ರವಲ್ಲದೇ ಸುಮಾರು 500 ರಿಂದ 600 ಕೋಟಿ ರೂಪಾಯಿಗಳಷ್ಟು ಲೆವಿಯ ಭವಿಷ್ಯದ ವಾರ್ಷಿಕ ಸಂಗ್ರಹಣೆಯನ್ನು ಖಚಿತಗೊಳಿಸಿಕೊಳ್ಳುವ ಉದ್ದೇಶವನ್ನೂ ಸಹ ಹೊಂದಿದೆ.

ಇದರಲ್ಲಿ ರಾಜ್ಯಕ್ಕೆ ಇತರ ವೆಚ್ಚದ ಪರಿಣಾಮವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತ ಜ್ಞಾಪನ ಪತ್ರ**

| | |
|---|---|
| **ಖಂಡ 2** | ಈ ಖಂಡದ ಮೂಲಕ ಸೇರಿಸಲು ಉದ್ದೇಶಿಸಿರುವ 2ನೇ ಪ್ರಕರಣದ (1ಎ) ಉಪಪ್ರಕರಣವು ಅರಣ್ಯ ಉತ್ಪನ್ನದ ಮಾರಾಟದ ಮೇಲೆ ಸ್ವೀಕರಿಸಿದ ಅಥವಾ ಸ್ವೀಕರಿಸಬಹುದಾದ ದರದ ಅಂಥ ಇತರ ಮೊತ್ತವನ್ನು ಲೆಕ್ಕಹಾಕುವ ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 3** | ಸೇರಿಸಲು ಉದ್ದೇಶಿಸಲಾದ 98ಎ ಪ್ರಕರಣದ (1–ಡಿ) ಉಪಪ್ರಕರಣವು, ಅರಣ್ಯ ಅಭಿವೃದ್ಧಿ ಶುಲ್ಕವನ್ನು ಪೂರ್ವಾನ್ವಯ ದಿನಾಂಕದಿಂದ ವಿಧಿಸುವ, ಲೆಕ್ಕಹಾಕುವ ಮತ್ತು ಸಂಗ್ರಹಿಸುವ ವಿಧಾನಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಬಿ.ರಮಾನಾಥ ರೈ**
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಅರಣ್ಯ ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 05) ಉದ್ಧೃತ ಭಾಗ**

**xxx xxx xxx**

**ಅಧ್ಯಾಯ XI ಎ**

**ಅರಣ್ಯಾಭಿವೃದ್ಧಿ ತೆರಿಗೆ**

**98ಎ. ಅರಣ್ಯ ಅಭಿವೃದ್ಧಿ ತೆರಿಗೆಯನ್ನು ವಿಧಿಸುವುದು.–** (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯ ಸರ್ಕಾರ ಅಥವಾ ಅದರ ಒಡೆತನ ಅಥವಾ ನಿಯಂತ್ರಣದಲ್ಲಿನ ಒಂದು ನಿಯಮದ ಅಥವಾ ರಾಜ್ಯ ಸರ್ಕಾರವು ಅಧಿಸೂಚಿಸಿದ ಒಂದು ನಿಕಾಯವು ಮಾರಾಟದ ಮೂಲಕ ಅಥವಾ ಅನ್ಯಥಾ ವಿಲೆ ಮಾಡಿದ ಅರಣ್ಯ ಉತ್ಪನ್ನಗಳಿಗೆ ಸಂಬಂಧಿಸಿದಂತೆ, ಆ ಬಗ್ಗೆ ಸಂದಾಯ ಮಾಡಿದ ಪ್ರತಿಫಲ ಧನದ ಮೊಬಲಿಗಿನ ಮೇಲೆ ಶೇಕಡಾ ಎಂಟರ ದರದಂತೆ ತೆರಿಗೆಯೂ ವಿಧಿಸಲ್ಪಡತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಸಂದಾಯವಾಗತಕ್ಕದ್ದು:

ಪರಂತು, (3)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ವ್ಯಕ್ತಿಗಳ ಅಥವಾ ಕೈಗಾರಿಕೆಗಳ ಪ್ರವರ್ಗಗಳಿಗೆ ಈ ಮುಂದಿನ ಕೋಷ್ಟಕದ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಅರಣ್ಯ ಉತ್ಪನ್ನಗಳ ವಿಲೆಯ ಮೇಲೆ ಈ ಉಪಪ್ರಕರಣದ ಅಡಿಯಲ್ಲಿ ವಿಧಿಸಿದ ಅಥವಾ ಸಂದಾಯ ಮಾಡಿದ ತೆರಿಗೆಯು ಪ್ರತಿಫಲ ಧನದ ಮೊಬಲಗಿನ ಶೇಕಡಾ ಹನ್ನೆರಡರಷ್ಟಾಗಿರತಕ್ಕದ್ದು.

**ಕೋಷ್ಟಕ**

| ಕ್ರಮ. ಸಂ | ಅರಣ್ಯ ಉತ್ಪನ್ನ | ಯಾರಿಗೆ ಎಂದು ವಿಲೆ ಮಾಡಲಾಯಿತು |
|---|---|---|
| (1) | (2) | (3) |
| 1 | ಚೌಬೀನೆ, ಸೌದೆ, ಹುಲ್ಲು ಇದ್ದಿಲು ಮತ್ತು ನೀಲಗಿರಿ ಮರ | ಕೈಗಾರಿಕೆಗಳು |
| 2 | ಬಿದಿರು, ಜೊಂಡು ಮತ್ತು ಬೆತ್ತಗಳು | ಗುಡಿ ಕೈಗಾರಿಕೆಗಳನ್ನು ಹೊರತುಪಡಿಸಿ ಪಲ್ಪ್ ಮತ್ತು ಕಾಗದ ಕೈಗಾರಿಕೆಗಳು |
| 3 | ಗಂಧದ ಮರ | (ಎ) ಗಂಧದೆಣ್ಣೆ ಕಾರ್ಖಾನೆಗಳು, ಮತ್ತು<br>(ಬಿ) ಇತರೆ, ಈ ಮುಂದಿನವುಗಳನ್ನು ಹೊರತುಪಡಿಸಿ,<br>(i) ಕುಶಲಕರ್ಮಿಗಳು<br>(ii) ಧಾರ್ಮಿಕ ಸಂಸ್ಥೆಗಳು; ಮತ್ತು<br>(iii) ಗುಡಿ ಕೈಗಾರಿಕೆಗಳು. |
| 4 | ನಿಯಮದಲ್ಲಿ ಪರಿಭಾಷಿಸಲಾದಂತೆ, ಆದರೆ ಕ್ರಮ ಸಂಖ್ಯೆ 1 ಮತ್ತು 2ರ ಅಡಿಯಲ್ಲಿರುವುದನ್ನು ಹೊರತುಪಡಿಸಿ ಸಣ್ಣ ಅರಣ್ಯ ಉತ್ಪನ್ನ. | ಬೃಹತ್ ಪ್ರಮಾಣದ ವಿವಿಧೋದ್ದೇಶಿತ ಸಹಕಾರಿ ಸಂಘಗಳನ್ನು (ಲ್ಯಾಂಪ್ಸ್) ಹೊರತು ಪಡಿಸಿ ಇತರೆ ಕೈಗಾರಿಕೆಗಳು. |

ಮತ್ತು ಪರಂತು, ವೃತ್ತಪತ್ರಿಕೆ ಕಾಗದದ ತಯಾರಿಕೆಗಾಗಿ ಕಚ್ಚಾ ವಸ್ತು ಎಂಬುದಾಗಿ ಸರಬರಾಜು ಮಾಡಿದ ನೀಲಗಿರಿ ಮರ ಮತ್ತು ಬಿದಿರಿಗೆ ಸಂಬಂಧಪಟ್ಟಂತೆ ಮೇಲ್ಕಂಡ ಉಪಬಂಧದ ಅಡಿಯಲ್ಲಿನ ತೆರಿಗೆಯು, ಐದು ವರ್ಷಗಳ ಅವಧಿಗಾಗಿ, ಅದರಲ್ಲಿ ನಿರ್ದಿಷ್ಟಪಡಿಸಿದ ದರಗಳ ಶೇಕಡಾ ಐವತ್ತರಷ್ಟಾಗಿರತಕ್ಕದ್ದು.

(1ಎ) (i) ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, 1978ರ ಫೆಬ್ರವರಿಯ ಹದಿನಾಲ್ಕನೇ ದಿನಾಂಕದಿಂದ ಕರ್ನಾಟಕ ಅರಣ್ಯ (ತಿದ್ದುಪಡಿ) ಅಧಿನಿಯಮ, 1988ರ ಪ್ರಾರಂಭದ ಅವಧಿಯವರೆಗೆ, ಅದು ವಿಧಿಸದಿರುವ ಮತ್ತು ಸಂಗ್ರಹಿಸದಿರುವ ತೆರಿಗೆಯಷ್ಟರ ಮಟ್ಟಿಗೆ ರಾಜ್ಯ ಸರ್ಕಾರವು ಒಡೆತನ ಹೊಂದಿದ ಅಥವಾ ನಿಯಂತ್ರಣ ಹೊಂದಿದ ನಿಗಮಗಳು ರಾಜ್ಯ ಸರ್ಕಾರಕ್ಕೆ ಯಾವುದೇ ತೆರಿಗೆಯನ್ನು ಸಂದಾಯ ಮಾಡತಕ್ಕದ್ದಲ್ಲ.

(2) ಸದರಿ ತೆರಿಗೆಯನ್ನು, ಅಂಥ ಪ್ರತಿಫಲ ಧನದೊಂದಿಗೆ ಸಂಗ್ರಹಿಸತಕ್ಕದ್ದು.

(3) ಸದರಿ ತೆರಿಗೆಯು, ಜಾರಿಯಲ್ಲಿರುವ ಯಾವುದೇ ಇತರೆ ಕಾನೂನಿನ ಅಡಿಯಲ್ಲಿ ಅಂಥ ಉತ್ಪನ್ನದ ಸಂಬಂಧದಲ್ಲಿ ಯಾವುದೇ ತೆರಿಗೆ ಸಂದಾಯಕ್ಕೆ ಹೆಚ್ಚುವರಿಯಾಗಿರತಕ್ಕದ್ದೇ ಹೊರತು ಬದಲಿಯಾಗಲ್ಲ.

(4) ಎಲ್ಲ ತೆರಿಗೆ ಬಾಕಿಗಳು ಸಂದಾಯವಾಗುವ ಅಥವಾ ವಸೂಲಾಗುವ ದಿನಾಂಕದವರೆಗೆ ವರ್ಷಕ್ಕೆ ಶೇಕಡಾ ಹದಿನೆಂಟರ ದರದಲ್ಲಿ ಬಡ್ಡಿಯನ್ನು ವಿಧಿಸಿ ಸಂಗ್ರಹಿಸತಕ್ಕದ್ದು.

**98ಬಿ. ಅರಣ್ಯ ಅಭಿವೃದ್ಧಿ ನಿಧಿ.–** (1) ಕರ್ನಾಟಕ ರಾಜ್ಯಕ್ಕಾಗಿ, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಧಿ ಎಂದು ಕರೆಯಲಾಗುವ ಒಂದು ನಿಧಿಯನ್ನು ರಚಿಸತಕ್ಕದ್ದು.

(2) ಈ ಮುಂದಿನವು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಧಿಯ ಭಾಗವಾಗಿರತಕ್ಕದ್ದು, ಎಂದರೆ:–

(ಎ) 98ಎ ಪ್ರಕರಣದ ಅಡಿಯಲ್ಲಿ ವಿಧಿಸಿದ ಮತ್ತು ಸಂಗ್ರಹಿಸಿದ ತೆರಿಗೆ;

(ಬಿ) ಅರಣ್ಯೇತರ ಉದ್ದೇಶಗಳಿಗಾಗಿ ವಹಿಸಿಕೊಟ್ಟ ಅರಣ್ಯದ ಬದಲು ಪರಿಹಾರ ರೂಪವಾಗಿ ನೆಡುತೋಪುಗಳನ್ನು ಬೆಳೆಸುವುದಕ್ಕಾಗಿ ವಸೂಲಿ ಮಾಡಿದ ಹಣ;

(ಸಿ) ಗಂಧದ ಮರದ ಸಂಪನ್ಮೂಲಗಳ ಅಭಿವೃದ್ಧಿಗಾಗಿ ಸಂಗ್ರಹಿಸಿದ ಗಂಧದ ಸರ್ಚಾರ್ಜ್‌ಗಳು.

(2ಎ) (2) ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಮೊಬಲಗನ್ನು ಮೊದಲು ರಾಜ್ಯದ ಸಂಚಿತನಿಧಿಗೆ ಜಮೆ ಮಾಡತಕ್ಕದ್ದು ಮತ್ತು ಈ ಸಂಬಂಧದಲ್ಲಿ ಕಾನೂನಿನ ಮೂಲಕ ಯುಕ್ತವಾಗಿ ಮಾಡಿದ ವಿನಿಯೋಜನೆಯನ್ನು ಅದರಲ್ಲಿ ನಮೂದಿಸುವುದು ಮತ್ತು ಅದನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಧಿಗೆ ವರ್ಗಾಯಿಸತಕ್ಕದ್ದು.

(3) (2)ನೇ ಉಪಪ್ರಕರಣದ ಅಡಿಯಲ್ಲಿನ ಸದರಿ ನಿಧಿಗೆ ವರ್ಗಾಯಿಸಿದ ಯಾವುದೇ ಮೊಬಲಗನ್ನು ರಾಜ್ಯದ ಸಂಚಿತ ನಿಧಿಗೆ ಖರ್ಚು ಹಾಕತಕ್ಕದ್ದು.

(4) ಸದರಿ ನಿಧಿಯ ಜಮೆಯಲ್ಲಿನ ಮೊಬಲಗನ್ನು ಅರಣ್ಯಗಳ ನೆಡುತೋಪುಗಳನ್ನು ಬೆಳೆಸಲು ಮತ್ತು ಅವುಗಳಿಗೆ ಆನುಷಂಗಿಕವಾಗಿರುವಂಥ ಇತರೆ ಉದ್ದೇಶಗಳಿಗಾಗಿ ಹೊರತು ಉಳಿದವುಗಳಿಗೆ ವೆಚ್ಚ ಮಾಡತಕ್ಕದ್ದಲ್ಲ.

**xxx xxx xxx**

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TENTH SESSION**

**THE KARNATAKA FOREST (AMENDMENT) BILL, 2016**
**(L.A. Bill No. 23 of 2016)**

A Bill further to amend the Karnataka Forest Act, 1963.

Whereas it is expedient further to amend the Karnataka Forest Act, 1963 (Karnataka Act 5 of 1964), for the purposes hereinafter appearing;

Be it enacted by the Karnataka State Legislature in the sixty- seventh year of the Republic of India as follows:-

**1. Short title and commencement.-** (1) This Act may be called the Karnataka Forest (Amendment) Act, 2016.

(2) It shall come into force at once.

**2. Amendment of section 2.-** In the Karnataka Forest Act, 1963 (Karnataka Act 5 of 1964) (hereinafter referred to as the principal Act) in section 2, after clause (1), the following clause shall be deemed to have been inserted with effect from the 16th day of August,2008, namely:-

"(1-A) "Consideration" means the price received or receivable on the sale of forest produce and computed in such manner and shall also include such other amount as may be prescribed by the State Government."

**3. Amendment of Chapter XIA.-** In the principal Act, in Chapter XIA,-

(1) including the headings and in section 98A and 98B for the word "tax" wherever it occurs, the word "fee" shall be deemed to have been substituted with effect from the 16th day of August, 2008;

(2) in section 98A,-

(i) in sub section (1),-

(a) for the words "or controlled by" the words "or controlled by the State Government" shall be deemed to have been substituted with effect from 16th day of August, 2008;

(b) The second proviso shall be omitted with the effect from the date of commencement of the Karnataka Forest (Amendment) Act, 2015 (Karnataka Act 41 of 2015); and

(c) after the second proviso to sub-section (1) the following proviso shall be deemed to have been inserted with effect from the 16th day of August, 2008; namely:-

"Provided also that, in respect of minerals which is a forest produce the rate of Forest Development fee shall be twelve percent."

(ii) after sub-section (1), the following explanations shall be deemed to have been inserted with effect from the 16th day of August, 2008, namely:-

"**Explanation:** (1) For the removal of doubts, it is hereby declared that for the purposes of this sub-section, the words "a body notified by the State Government" shall mean and include all entities directly or indirectly engaged in disposing of forest produce found in, or brought from, a forest, as individuals or other entities including Hindu Undivided Family, Company or foreign Company, partnership firms, societies, cooperative societies, other bodies corporate, trusts, lease holders of mines and quarries situated in forest area or any other association or committee or person, whether or not such individuals or entities constituted themselves into a juristic entity and whether or not such individuals or entities collectively come together and act as a group or body.

**Explanation:** (2) For the removal of doubts, it is hereby declared that for the purpose of this sub-section, the words, "or otherwise" includes disposal through captive consumption.

**Explanation:** (3) For the removal of doubts, it is hereby declared that Forest Development Fee shall be levied on the disposal of the forest produce irrespective of whether such forest produce is intended for sale inside or outside the State of Karnataka or for the purpose of export or for captive consumption. "

(iii) after the sub section (1-A), the following shall be inserted, namely:-

"(1-B) Notwithstanding anything contained in subsection(1), no fee shall be levied on the forest produce which is not found in or not brought from the forest except when it is disposed of by the State Government;

(1-C) Notwithstanding anything contained in subsection(1), no Forest Development Fee on forest produce shall be payable to the State Government, for which no demand was raised during the period from 16th August of 2008 till the commencement of the Karnataka Forest (Amendment) Act, 2015 (Karnataka Act 41 0f 2015); and

(1-D) The State Government may make rules regarding manner of Levy, computation and collection of Forest Development fee from a retrospective date."

(3) after section 98B, the following new section shall be inserted, namely:-

"**98C. Power of State Government to exempt or reduce Forest Development fee.-** (1) The State Government may, if in its opinion it is necessary in public interest so to do, by notification and subject to such restrictions and conditions and for such period as may be specified in the notification, exempt or reduce either prospectively or retrospectively the forest Development fee payble under this Act, by any specified class of persons or in respect of any specified forest produce;

(2) The State Government may, by notification cancel or vary any notification issued under sub-section (1).

(3) Where any restriction or condition specified under sub-section (1) is contravened or is not observed by a person or a declaration furnished under the said sub-section is found to be wrong, then such person shall be liable to pay by way of penalty an amount equal to twice the difference between the fee payable at the rates specified by or under the Act and the fee paid at the rates specified under the notification on the consideration of such forest produce in respect of which such contravention or non-observance has taken place or a wrong declaration is furnished:

Provided that before taking action under the sub-section the person shall be given a reasonable opportunity of being heard."

**4.** For the removal of doubts it is hereby declared that, the levy assessment and collection of Forest Development tax under the principal Act as amended by this Act or any rules, notification, order letter or guidelines shall be deemed to have always been levied and collected as Forest Development Fee.

**5.** No penal proceedings shall be commenced against any person for any contravention of the provisions of chapter XIA of the Principal Act that may arise as a consequence of the retrospective amendments made by this Act.

**6. Validation of Levy and collection of any amount as Forest Development Tax or Fee.-** Notwithstanding anything contained in any judgement, decree or order of any Court, Tribunal or other authority to the contrary levy, assessment or collection of any amount as tax or fee on Forest produce as Forest development Tax or fee made or purporting to have been made and any action or thing taken or done (including any notices or orders issued or assessment made) and all proceedings held and any levy and collection of tax, fee or amount purported to have been collected by way of tax or fee in relation to such levy assessment or collection under the provisions of the Principal Act or any rules, notification, order, guidelines or letters before the commencement of this Act shall be and shall be deemed to be valid and effective for all purposes as if such levy, assessment or collection or action or thing had been made, taken or done under the Principal Act as amended by this Act and accordingly:-

(a) all acts, proceedings or things done or any action taken by the Government or as the case may be the Forest Department officers in connection with the levy, assessment or collection of any amount as forest Development tax or Forest Development fee for all purposes be deemed to be, and to have always been made done or taken in accordance with law;

(b) no suit or other proceedings shall be maintained or continued in any Court or Tribunal or before any authority for the refund of any such tax or fee; and

(c) no Court shall enforce any decree or order directing the refund of any such tax or fee.

## STATEMENT OF OBJECTS AND REASONS

1. It is considered necessary further to amend the Karnataka Forest Act, 1963 (Karnataka Act 5 of 1964) (hereinafter called the Act) to remove doubts regarding the nature, ambit and scope of the levy of Forest Development Tax (FDT). As explained below, the objects of this amendment Bill, to be made retrospective from the 16th day of August, 2008, are:-
   - (i) to declare the meaning and purpose of the words “a body notified by the State Government” occurring in section 98A;
   - (ii) to re-state the nature of levy and declare that it is in the nature of a fee;
   - (iii) to validate the collection of Forest Development Tax or Forest Development Fee from 2008 onwards.
2. The amendments to sections 98A and 98B are being made retrospectively from 16th day of August, 2008 when Notification No.FEE 248 FDP 2006 dated 16-08-2008 Bangalore was issued. Although section 98A came into force from 24.12.1975, the present amendment is being made retrospectively only from the date of this notification to avoid unnecessary hardship to entities who are covered by Chapter XI-A of the Forest Act, 1963.
3. Section 98A of the Act was amended to include the words “or by a corporation, owned or controlled by or a body notified by the State Government” by Amendment Act 10 of 1989. The said amendment was made with the intention of including all persons, who are disposing

of forest produce by way of sale or otherwise, including State-owned and controlled corporations as well as entities such as private individuals, firms, companies or anybody else, within the purview or ambit of the levy under section 98 A of the Act. The latter category, which were neither State-owned nor State controlled, were intended to be included within the expression "a body" in section 98A(1). This was done with the object of augmenting revenue for the purpose of "afforestation", amelioration of environment, enhancing the tree cover and activities ancillary thereto as mandated under Section 98B by levying a fee on disposal of forest produce.

4. Thus, the intention of the legislature was always to ensure that all entities whether State-owned, State-controlled or not, that were disposing of forest produce by way of sale or otherwise were brought within the purview or ambit of the levy of Forest Development Tax (FDT). There was never an intention of restricting the statutory mandate of collecting and paying the levy only to State Government and its Undertakings and excluding all non-Government entities and undertakings of the Central Government. It was never the intention of the Legislature that Forest Development Tax was to be collected only when entities acted together as an association or conglomeration. Indeed, such an interpretation would not only defeat the object of amending section 98A but also seriously jeopardize the programmes for development and regeneration of forests in the State of Karnataka.

5. The State of Karnataka issued Notification No.FEE 248 FDP 2006 dated 16.8.2008 under Section 98A(1) of the Act whereby all lease-holders of mines and quarries situated in the forest area were notified in exercise of the powers conferred by section 98A(1). The validity of this notification and certain other issues came up for consideration before the Division Bench of the Karnataka High Court in W.P. No 2462 of 2009 (and other connected matters) and the judgment was rendered on 03.12.2015. The Hon'ble High Court, *inter alia,* was pleased to quash the notification on the ground that the expression "*a body"* would not include leaseholders of mines and quarries, whether as an individual or as other juristic entity. According to the Hon'ble High Court, leaseholders could be individuals, partnership firms, societies, co-operative societies, companies incorporated under the Companies Act or any other association or persons. Unless all of them constituted themselves into "a body", which would inevitably be a juristic entity having a legal persona, such as a federation in which the leaseholders are members, or a company, wherein they are shareholders, or, a society, wherein they are members and one of the activities of such federation or company or society is disposal of minerals as forest produce by sale or otherwise, they could not be treated as a body that could be notified by the State Government. Thus, independent or separate lease holders, whether they are private individuals or partnership firms or companies or any other juristic entity, could not be construed to come within the expression "a body" under sub-section (1) of Section 98-A of the Act. This interpretation has resulted in numerous leaseholders of mines and quarries situated in forest area not being liable to collect and pay the "forest development tax" (FDT). This was clearly never the intention of the legislature because the word *"a body"* was never intended to apply to only juristic entities consisting of a conglomeration of leaseholders, either as individuals or companies or firms and so on. It is also clear that lease holders of mines and quarries situated in forest area will never collectively act as an association or a conglomerate while purchasing or selling or disposing of forest produce.

6. It is, therefore, necessary to amend section 98A(1) retrospectively and declare that the word "a body" included and, has always included, even leaseholders of mines and quarries situated in forest area even if they did not constitute themselves collectively, as a federation, company or society or an association of persons. Significantly, the Hon'ble High Court has accepted this view that the expression "a body" will include any autonomous or private body in which the State Government did not have any control in any manner whatsoever. The proposed amendments are intended to declare that all lease-holders of mines and quarries in forest area come within the definition of "a body" and are liable to collect and pay Forest Development Tax or Forest Development Fee as this levy is critical for the development and regeneration of forests. The proposed amendments will cure the infirmity and remove the defect which was found in the existing provisions. The Bill also contains a validation clause that is dealt with later.

**Tax and Fee:**

7 In *Guru Siddappa v State of Karnataka* AIR 1981 Kar 216, the Division Bench of the Karnataka High Court had held that the Forest Development Tax (FDT) levied on the purchase price of forest produce was within the legislative competence of the State under Entry 54 of List-II and constitutionally valid. Although the unamended section 98A(1) refers to the levy of a tax, the impost is more in the nature of a fee. The amount collected by way

of forest development tax is earmarked for development and regeneration of forest and does not go to the general revenue of the State to be spent for general public purpose. This is also made clear by section 98B of the Act which specifies that the Forest Development Tax (FDT) and interest that is levied and collection under section 98A will form part of the Karnataka Forest Development Fund. The Forest Development Tax (FDT) and other amounts specified in section 98B(2), although credited to the Consolidated Fund of the State, is later appropriated and transferred to the aforesaid Karnataka Forest Development Fund.

8 In *State of Maharashtra v Salvation Army* AIR 1975 SC 846, the Supreme Court held that an impost which initially was in the nature of a fee would subsequently assume the characteristics of a tax. The converse is equally true. The decision of the Karnataka High Court was rendered in 1981 and Forest Development Tax (FDT) was treated as a tax coming within Entry 54 of List-II.

9 Since the Forest Development Tax (FDT), as a fee, will be levied at the time of disposing by way of sale or otherwise of forest produce, the fee is being levied in exercise of the powers of the State Legislature under Entry 66 of List-II of Schedule VII of the Constitution. In *Corporation of Calcutta v. Liberty Cinemas* AIR 1965 SC 1107. Hon'ble Supreme Court held that the fee can also be under an enactment relatable to the imposition of a tax. In any event, the State Government has the authority to levy such fee under Entry 47, List III.

**Validation:**

10 .1 The State Government has levied and collected more than Rupees 3500 crores as Forest Development Tax (FDT) after the impugned notification was issued in 2008. All the petitioners in the above judgment conceded that they were disputing the levy only upto 2011. However, it is proposed to validate such collections both by the lease holders of mines and quarries situated in forest area and by the Monitoring Committee, from the purchasers of minerals till date. The present Bill seeks to achieve the objects as mentioned above and also to provide for the validation of the levy and collection of Forest Development Tax (FDT). Clause 6 of the Bill, *inter alia,* provides that any demand and/or any action taken under the provisions of the Act as in existence prior to this amendment Bill shall be deemed to have taken or levied under the new law after the amendment. This will validate the demand made by deeming it to have been made under the amended law and thus protect the revenue of the State. This Bill thus cures the infirmity and removes the defect found in the existing provisions and makes adequate provisions in the validation clause for a valid imposition of the Forest Development Tax and Forest Development Fee.

10.2 The State Government proposes to recompute the Forest Development Fee as per prescribed rules or guidelines. If the demand as computed as per new rules or guidelines is lesser than the amount of Forest Development Fee demanded under the erstwhile section 98A or any notification issued thereunder, the lesser amount will be payable as Forest Development Fee.

10.3 A provision is also proposed to exempt or reduce Forest Development Tax (FDT) or Forest Development Fee by Government by notification prospectively or retrospectively in public interest by any specific clause of person or in respect of any specified forest produce.

**Penalty:**

11 It is made clear that no penal proceedings will be commenced as a consequence of the retrospective amendments that are proposed in the Bill. This will also ensure compliance with Article 20(1) of the Constitution.

**Rate of Tax or Fee:**

12 Demand were raised at the rate of 12% on the disposal of minerals, although section 98A(1) prescribed a rate of 8% tax on forest produce other than those mentioned in the erstwhile proviso and Table thereto. The Karnataka Forest (Amendment) Act, 2015 imposed a levy of 12% but omitted to amend the rate retrospectively. It is now made clear that 8% shall be retrospectively increased to 12% from 16$^{th}$August, 2008 onwards. Indeed, demands have been made at this rate from16$^{th}$August, 2008.

13 By order dated 02.09.2011 and 23.9.2011, the Supreme Court in WP(C) 562 of 2009 directed that the Monitoring Committee shall collect Forest Development Tax (FDT) "as applicable". Accordingly, all buyers of iron ore, extracted from the leases in forest area (including the petitioners before the Karnataka High Court in W.P. No. 2642 of 2009 and other connected matters), have paid Forest Development Tax (FDT) at the rate of 12% to the Monitoring Committee without any protest or demur. No application was ever made to seek a clarification that the applicable rate of Forest Development Tax (FDT) was 8% and not 12%. Accordingly it has been uniformly accepted that Forest Development Tax (FDT) would be 12%. The petitioners before the Karnataka High Court have also restricted their claim only for the period before 23.09.2011. Thus, the rate of Forest

Development Tax or Forest Development Fee is retrospectively amended to be 12% from the 16th day of August, 2008.

**Rules for computing Forest Development Fee.**

14 The rules or guidelines for computing Forest Development Fee are also being finalised. These rules will also have to be applicable retrospectively from 16th day of August, 2008. Accordingly clause 3 of the Bill enables such rules to be inserted with retrospective effect.

Hence the Bill.

**FINANCIAL MEMORANDUM**

Hon'ble High Court of Karnataka in W.P.No.2462 of 2009 and other connected matters through their order dated 03.12.2016 have quashed the notification No. FEE 248 FDP 2006 and directed the State Government to refund the amount collected as Forest Development Tax which was collected based on the impugned notification. The order of Hon'ble High Court is challenged through an SLP before the Hon'ble Supreme Court. During pendency of the case the present amendment is proposed for removal of the basis of the order of Hon'ble High Court through rectification of short comings in the law and clarifying the intent of the law. This is the only way forward to protect the already collected approximate amount of Rs. 3640 crores. This amendment is intended not only to retain Rs.3640 crores but also to ensure future annual collection of levy of about of Rs.500 to 600 crores.

There is no other expenditure implication for the State.

**MEMORANDUM REGARDING DELEGATED LEGISLATION**

| | |
|---|---|
| Clause-2 | Sub-section (1-A) of section 2, proposed to be inserted, empowers the State Government to make rules regarding the manner of computation of such other amount of price received or receivable on the sale of forest produce. |
| Clause-3 | Sub-section (1-D) of Section 98A, proposed to be inserted, empowers the State Government to make rules regarding the manner of Levy, computation and collection of Forest Development Fee from a retrospective date. |

The Proposed delegation of legislative power is normal in character.

**B. Ramanatha Rai**
Minister for Forest, Environment and Ecology

**S.Murthy**
Secretary (I/C)
Karnataka Legislative Assembly

**ANNEXURE**
**EXTRACT FROM THE KARNATAKA FOREST ACT, 1963**
**(Karnataka 5 of 1964).**

**XXX** **XXX** **XXX**

**CHAPTER XI-A**
**FOREST DEVELOPMENT TAX**

**98A. Levy of Forest Development Tax.**—(1) Notwithstanding anything contained in this Act, in respect of forest produce disposed of by the State Government or by a corporation, owned or controlled by or a body notified by the State Government by sale or otherwise, there shall be levied and paid to the State Government a tax at the rate of eight percent on the amount of consideration paid therefor.

Provided that the tax levied and paid under this sub-section on the disposal of forest produce specified in column (2) of the Table below to the categories of persons or industries specified in column (3) thereof shall be twelve per cent on the amount of consideration.

**TABLE**

| Sl. No. | Forest produce | When disposed of to |
|---|---|---|
| (1) | (2) | (3) |
| 1 | Timber, firewood, grass, charcoal Industries and eucalyptus | Industries |
| 2 | Bamboo, reeds and canes. | Pulp and paper industries except cottage industries; |
| 3 | Sandalwood. | (a) Sandalwood oil factories and<br>(b) Others, except;<br>(i) Artisans<br>(ii) Religious institutions; and<br>(iii) Cottage industries |
| 4 | Minor forest produce as defined in the rule but not falling under Serial Numbers 1 and 2. | Industries except Large scale Multipurpose Co-operative Societies (LAMPS) |

Provided further that the tax under the above proviso in respect of eucalyptus and bamboos supplied as raw material for manufacture of news print shall be fifty per cent of the rates specified therein or a period of five years.

(1A) Notwithstanding anything contained in sub-section (1), no tax shall be payable to the State Government by a corporation, owned or controlled by the State Government to the extent of tax not levied and collected by it during the period from fourteenth day of February, 1978, till the commencement of the Karnataka Forest (Amendment) Act, 1988.

(2) The said tax shall be collected along with such consideration.

(3) It is hereby declared that the said tax shall be in addition to and not in lieu of any tax payable in respect of such produce under any other law in force.

(4) There shall be levied and collected interest at the rate of eighteen percent per annum till the date of payment or recovery of all tax dues.

**98B. Forest Development Fund.**—(1) There shall be constituted for the State of Karnataka a Fund called the Karnataka Forest Development Fund.

(2) The following shall form part of the Karnataka Forest Development Fund, namely:—

(a) the tax and interest levied and collected under section 98A;

(b) the money recovered for raising compensatory plantation in lieu of the forest area made over for non-forestry purposes;

(c) sandal surcharges collected for the development of sandalwood resources;

(2A) The amounts referred to in sub-section (2) shall first be credited to the Consolidated Fund of the State and under appropriation duly made by law in this behalf, be entered in and transferred to the Karnataka Forest Development Fund.

(3) Any amount transferred to the said fund under sub-section (2), shall be charged upon the Consolidated Fund of the State.

(4) The amount at the credit of the said fund shall not be expended except for the raising of forest plantation and for such other purpose as are ancillary thereto.

XXX XXX XXX

**S. MURTHY**
Secretary(I/c)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ-*IVA* | ಬೆಂಗಳೂರು, ಶುಕ್ರವಾರ, ಜುಲೈ ೧೫, ೨೦೧೬ (ಆಷಾಢ ೨೪, ಶಕ ವರ್ಷ ೧೯೩೮) | ನಂ. ೯೨೧ |
|---|---|---|
| ***Part–IVA*** | ***Bengaluru, Friday, July 15, 2016 (Ashada 24 Shaka Varsha 1938)*** | ***No. 921*** |


**KARNATAKA LEGISLATIVE ASSEMBLY SECRETARIAT**
**NOTIFICATION**
**No. KLA/LGA/24/Bill/2016, Bengaluru, Dated: 15.07.2016**

The following Bill was introduced in Legislative Assembly on 15.07.2016

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಹತ್ತನೇ ಅಧಿವೇಶನ**

### ಕರ್ನಾಟಕ ಗೃಹ ನಿರ್ಮಾಣ ಮಂಡಲಿ (ತಿದ್ದುಪಡಿ) ವಿಧೇಯಕ, 2016

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ–24)**

ಕರ್ನಾಟಕ ಗೃಹ ನಿರ್ಮಾಣ ಮಂಡಲಿ ಅಧಿನಿಯಮ, 1962ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಗೃಹ ನಿರ್ಮಾಣ ಮಂಡಲಿ ಅಧಿನಿಯಮ, 1962ನ್ನು (1963ರ ಕರ್ನಾಟಕ ಅಧಿನಿಯಮ 10) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಗೃಹ ನಿರ್ಮಾಣ ಮಂಡಲಿ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ದೀರ್ಘ ಹೆಸರು ಮತ್ತು ಪ್ರಸ್ತಾವನೆಯ ತಿದ್ದುಪಡಿ.–** ಕರ್ನಾಟಕ ಗೃಹ ನಿರ್ಮಾಣ ಮಂಡಲಿ ಅಧಿನಿಯಮ, 1962ರ (1963ರ ಕರ್ನಾಟಕ ಅಧಿನಿಯಮ 10) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮ ಎಂದು ಉಲ್ಲೇಖಿಸಲಾಗಿದೆ), ದೀರ್ಘ ಹೆಸರು ಮತ್ತು ಪ್ರಸ್ತಾವನೆಯ ಮೊದಲನೇ ಕಂಡಿಕೆಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಸಮಾಜದ ಎಲ್ಲ ವರ್ಗಗಳಿಗೆ ಗುಣಮಟ್ಟದ ಮತ್ತು ಕೈಗೆಟಕುವ ದರದ ವಸತಿ ಸ್ಥಳಾವಕಾಶವನ್ನು ಒದಗಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ಅಧಿನಿಯಮ.

ಆರ್ಥಿಕವಾಗಿ ದುರ್ಬಲರಾದ ವರ್ಗಗಳಿಗೆ ವಿಶೇಷ ಒತ್ತು ನೀಡಿ, ಸಮಾಜದ ಎಲ್ಲ ವರ್ಗಗಳಿಗೆ ಗುಣಮಟ್ಟದ ಮತ್ತು ಕೈಗೆಟಕುವ ದರದಲ್ಲಿ ವಸತಿ ಸ್ಥಳಾವಕಾಶವನ್ನು ಒದಗಿಸುವುದು ಹಾಗೂ ಸುಸ್ಥಿರ, ನ್ಯಾಯೋಚಿತ ಮತ್ತು ಪರಿಸರಸ್ನೇಹಿ ವಿನ್ಯಾಸ ಮತ್ತು ನಿರ್ಮಾಣ ತಂತ್ರಗಳನ್ನು ಅಳವಡಿಸಿಕೊಳ್ಳುವುದು ಯುಕ್ತವಾಗಿರುವುದರಿಂದ ಮತ್ತು ಆ ಅಭಿಪ್ರಾಯದ ಉದ್ದೇಶದೊಂದಿಗೆ ಕರ್ನಾಟಕ ರಾಜ್ಯಕ್ಕೆ ಒಂದು ಮಂಡಲಿಯನ್ನು ಸ್ಥಾಪಿಸುವುದು ಮತ್ತು ಕೆಲವು ಇತರ ಉಪಬಂಧಗಳನ್ನು ಕಲ್ಪಿಸುವುದು ಅವಶ್ಯಕವಾಗಿರುವುದರಿಂದ;"

**3. 2ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 2ನೇ ಪ್ರಕರಣದಲ್ಲಿ,–

(i) (ಹೆಚ್) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಹೆಚ್–1) "ಜಂಟಿ ಉದ್ಯಮ ಯೋಜನೆಗಳು" ಎಂದರೆ, ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು, ಸ್ಥಳೀಯ ನಿಕಾಯಗಳು ಅಥವಾ ಖಾಸಗಿ ಪಕ್ಷಕಾರರು ಮತ್ತು ಮಂಡಲಿಯು ಜಂಟಿಯಾಗಿ ಕೈಗೊಳ್ಳುವ ಯೋಜನೆಗಳು."

(ii) (ಎನ್) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎನ್–1) "ಸಾರ್ವಜನಿಕ ಖಾಸಗಿ ಸಹಭಾಗಿತ್ವ ಯೋಜನೆಗಳು" ಎಂದರೆ, ನಿಯಮಿಸಬಹುದಾದ ಅಂಥ ಮಾನದಂಡಗಳಿಗೆ ಒಳಪಟ್ಟು, ಸಾರ್ವಜನಿಕ ಸ್ವತ್ತನ್ನು ಅಥವಾ ಸೇವೆಯನ್ನು ಒದಗಿಸುವುದಕ್ಕಾಗಿ, ಖಾಸಗಿ ಪಕ್ಷಕಾರ ಮತ್ತು ಮಂಡಲಿಯ ನಡುವೆ ಕರಾರಿನ ನಿರ್ದಿಷ್ಟ ನಿಬಂಧನೆಯ ಮೇಲಿನ ಯೋಜನೆ"

**4. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದಲ್ಲಿ,–

(ಎ) (ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಸಂದರ್ಭಾನುಸಾರವಾಗಿ ಕಾರ್ಯದರ್ಶಿ, ವಸತಿ ಇಲಾಖೆ, ಕರ್ನಾಟಕ ಸರ್ಕಾರ;"

(ಬಿ) (ಇ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಇ) ಪಟ್ಟಣ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ಕರ್ನಾಟಕ ಸರ್ಕಾರ;"

(ಸಿ) (ಎಫ್) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎಫ್) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಸಂದರ್ಭಾನುಸಾರವಾಗಿ ಕಾರ್ಯದರ್ಶಿ – ಇಂಧನ ಇಲಾಖೆ, ಕರ್ನಾಟಕ ಸರ್ಕಾರ;"

(ಡಿ) (ಹೆಚ್) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಹೆಚ್–1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಸಂದರ್ಭಾನುಸಾರವಾಗಿ ಕಾರ್ಯದರ್ಶಿ – ನಗರಾಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ;

(ಹೆಚ್–2) ಮಂಡಲಿಯ ಮುಖ್ಯ ಇಂಜಿನಿಯರು;

(ಹೆಚ್–3) ಮಂಡಲಿಯ ಪಟ್ಟಣ ಮತ್ತು ಗ್ರಾಮಾಂತರ ಯೋಜನೆಯ ಅಪರ ನಿರ್ದೇಶಕರು;

(ಹೆಚ್–4) ಮಂಡಲಿಯ ಕಾರ್ಯದರ್ಶಿಯು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;"

(ಇ) (ಐ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಐ) ರಾಜ್ಯ ಸರ್ಕಾರವು ನೇಮಕ ಮಾಡಿದ ಮೂವರು ಅಧಿಕಾರೇತರ ಸದಸ್ಯರು, ಇವರಲ್ಲಿ ಒಬ್ಬರು ಮಹಿಳೆಯಾಗಿರತಕ್ಕದ್ದು".

(ii) (4)ನೇ ಉಪಪ್ರಕರಣದಲ್ಲಿ, "ಭೂ ಆರ್ಜನಾ ಅಧಿನಿಯಮ, 1894ರ" ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ, "ಭೂ ಆರ್ಜನೆ, ಪುನರ್ವಸತಿ ಮತ್ತು ಪುನರ್‌ನಿರ್ಮಾಣದಲ್ಲಿ ನ್ಯಾಯಯುತ ಪರಿಹಾರ ಮತ್ತು ಪಾರದರ್ಶಕತೆಯ ಹಕ್ಕು ಅಧಿನಿಯಮ, 2013ರ (2013ರ ಕೇಂದ್ರ ಅಧಿನಿಯಮ ಸಂಖ್ಯೆ 30)" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು.

**5. 6ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 6ನೇ ಪ್ರಕರಣದಲ್ಲಿ, "ಇತರ ಪ್ರತಿಯೊಬ್ಬ ಸದಸ್ಯರು" ಎಂಬ ಪದಗಳಿಗೆ, ಅವು ಬರುವ ಕಡೆಗಳಲ್ಲೆಲ್ಲಾ, "ಇತರ ಅಧಿಕಾರೇತರ ಸದಸ್ಯರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**6. 7ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 7ನೇ ಪ್ರಕರಣದಲ್ಲಿ,–

(i) "ಯಾರೇ ಇತರ ಸದಸ್ಯರು" ಎಂಬ ಪದಗಳಿಗೆ "ಯಾವೊಬ್ಬ ಇತರ ಅಧಿಕಾರೇತರ ಸದಸ್ಯರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) (ಸಿ) ಖಂಡದಲ್ಲಿ, "ಸದಸ್ಯರಾಗಿರುವುದು" ಎಂಬ ಪದಗಳಿಗೆ "ಅಧಿಕಾರೇತರ ಸದಸ್ಯರಾಗಿರುವುದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 8ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 8ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ, "ಸದಸ್ಯನ" ಎಂಬ ಪದಕ್ಕೆ "ಅಧಿಕಾರೇತರ ಸದಸ್ಯನ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) (2)ನೇ ಉಪಪ್ರಕರಣದಲ್ಲಿ, "ಸದಸ್ಯರು" ಎಂಬ ಪದಗಳಿಗೆ "ಅಧಿಕಾರೇತರ ಸದಸ್ಯರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

**8. 10ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 10ನೇ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ "ಮುಖ್ಯ ಇಂಜಿನಿಯರ್" ಎಂಬ ಪದಗಳ ತರುವಾಯ, "ಪಟ್ಟಣ ಮತ್ತು ಗ್ರಾಮಾಂತರ ಯೋಜನೆಯ ಅಪರ ನಿರ್ದೇಶಕರು" ಎಂಬ ಪದಗಳನ್ನು ಸೇರಿಸತಕ್ಕದ್ದು;

(ii) (2)ನೇ ಉಪಪ್ರಕರಣದಲ್ಲಿ, "ಒಬ್ಬ ಮುಖ್ಯ ಇಂಜಿನಿಯರನ್ನು" ಎಂಬ ಪದಗಳ ತರುವಾಯ, "ಪಟ್ಟಣ ಮತ್ತು ಗ್ರಾಮಾಂತರ ಯೋಜನೆಯ ಅಪರ ನಿರ್ದೇಶಕನನ್ನು" ಎಂಬ ಪದಗಳನ್ನು ಸೇರಿಸತಕ್ಕದ್ದು;

(iii) (7)ನೇ ಉಪಪ್ರಕರಣದಲ್ಲಿ, "ಮುಖ್ಯ ಇಂಜಿನಿಯರನು" ಎಂಬ ಪದಗಳ ತರುವಾಯ, ", ಪಟ್ಟಣ ಮತ್ತು ಗ್ರಾಮಾಂತರ ಯೋಜನೆಯ ಅಪರ ನಿರ್ದೇಶಕನು" ಎಂಬ ಪದಗಳನ್ನು ಅಲ್ಪವಿರಾಮ ಚಿಹ್ನೆಯೊಡನೆ ಸೇರಿಸತಕ್ಕದ್ದು.

**9. 15ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 15ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,–

(i) (ಎ) ಖಂಡದಲ್ಲಿ, "ಐವತ್ತು ಲಕ್ಷ ರೂಪಾಯಿ" ಎಂಬ ಪದಗಳಿಗೆ, "ಇನ್ನೂರಾ ಐವತ್ತು ಲಕ್ಷ ರೂಪಾಯಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (ಬಿ) ಖಂಡದಲ್ಲಿ, ಎರಡು ಕಡೆಗಳಲ್ಲಿ ಬರುವ "ಹತ್ತು ಲಕ್ಷ ರೂಪಾಯಿ" ಎಂಬ ಪದಗಳಿಗೆ "ಐವತ್ತು ಲಕ್ಷ ರೂಪಾಯಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(iii) (ಬಿ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಸಿ) ಇನ್ನೂರಾ ಐವತ್ತು ಲಕ್ಷ ಮತ್ತು ಅದಕ್ಕಿಂತ ಹೆಚ್ಚು ರೂಪಾಯಿಗಳ ಅಂದಾಜು ವೆಚ್ಚವನ್ನು ಒಳಗೊಂಡಿರುವ ಯಾವುದೇ ಜಂಟಿ ಉದ್ಯಮ ಅಥವಾ ಸಾರ್ವಜನಿಕ–ಖಾಸಗಿ ಸಹಭಾಗಿತ್ವ ವ್ಯವಸ್ಥೆಯನ್ನು, ಅಂಥ ಜಂಟಿ ಉದ್ಯಮ ಅಥವಾ ಸಂದರ್ಭಾನುಸಾರವಾಗಿ ಸಾರ್ವಜನಿಕ–ಖಾಸಗಿ ಸಹಭಾಗಿತ್ವದ ಸಂಬಂಧದಲ್ಲಿ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು, ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೆ ಮಾಡತಕ್ಕದ್ದಲ್ಲ."

**10. 17ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 17ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**17. ಗೃಹನಿರ್ಮಾಣ ಯೋಜನೆಗಳು, ಭೂ ಅಭಿವೃದ್ಧಿ ಯೋಜನೆಗಳು, ಮೂಲಸೌಲಭ್ಯ ಅಭಿವೃದ್ಧಿ, ಕಟ್ಟಡ ನಿರ್ಮಾಣ ಯೋಜನೆಗಳು, ಜಂಟಿ ಉದ್ಯಮಗಳ ಅಡಿಯಲ್ಲಿನ ಅಥವಾ ಸಾರ್ವಜನಿಕ–ಖಾಸಗಿ ಸಹಭಾಗಿತ್ವದ ಅಡಿಯಲ್ಲಿನ ಯೋಜನೆಗಳನ್ನು ಕೈಗೊಳ್ಳುವುದು ಮಂಡಲಿಯ ಕರ್ತವ್ಯವಾಗಿರತಕ್ಕದ್ದು.–**ಈ ಅಧಿನಿಯಮದ ಮತ್ತು ಈ ಸಂಬಂಧದಲ್ಲಿ ರಚಿಸಿದ ನಿಯಮಗಳ ಉಪಬಂಧಗಳಿಗೆ ಮತ್ತು ರಾಜ್ಯ ಸರ್ಕಾರದ ನಿಯಂತ್ರಣಕ್ಕೆ ಒಳಪಟ್ಟು, ಮಂಡಲಿಯು, ತಾನು ಅವಶ್ಯವೆಂದು ಪರಿಗಣಿಸಬಹುದಾದ ಅಥವಾ ರಾಜ್ಯ ಸರ್ಕಾರ ಅಥವಾ ಸರ್ಕಾರಿ ಉದ್ಯಮಗಳು ಅಥವಾ ಜಂಟಿ ಉದ್ಯಮ ಅಥವಾ ಸಾರ್ವಜನಿಕ–ಖಾಸಗಿ ಸಹಭಾಗಿತ್ವ ವ್ಯವಸ್ಥೆಗಳ ಅಡಿಯಲ್ಲಿ ಅದಕ್ಕೆ ವಹಿಸಿಕೊಡಬಹುದಾದ ಅಂಥ ಗೃಹನಿರ್ಮಾಣ ಯೋಜನೆಗಳು, ಭೂ ಅಭಿವೃದ್ಧಿ ಯೋಜನೆಗಳು, ಮೂಲಸೌಲಭ್ಯ ಅಭಿವೃದ್ಧಿ, ವಾಣಿಜ್ಯ ಆವರಣಗಳ ನಿರ್ಮಾಣ ಮತ್ತು ಹಸ್ತಾಂತರ ಹಾಗೂ ಕಟ್ಟಡ ನಿರ್ಮಾಣ ಯೋಜನೆಗಳನ್ನು ರೂಪಿಸುವುದಕ್ಕಾಗಿ ಮತ್ತು ಅವುಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ, ನಿಯಮಿಸಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು, ವೆಚ್ಚವನ್ನು ಭರಿಸಬಹುದು ಮತ್ತು ಯಾವುದೇ ಪ್ರದೇಶದಲ್ಲಿ ಕಾಮಗಾರಿಗಳನ್ನು ಕೈಗೊಳ್ಳಬಹುದು."

**11. 19ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 19ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ (iii)ನೇ ಖಂಡವನ್ನು ಬಿಟ್ಟುಬಿಡತಕ್ಕದ್ದು.

**12. 20ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 20ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**20. ಕಾರ್ಯಕ್ರಮ ಮತ್ತು ಬಜೆಟ್ಟಿಗೆ ಮಂಜೂರಾತಿ.–** ರಾಜ್ಯ ಸರ್ಕಾರವು, ತನಗೆ ಕಳುಹಿಸಿದ ಕಾರ್ಯಕ್ರಮ ಮತ್ತು ಬಜೆಟ್ಟನ್ನು, ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಮಾರ್ಪಾಡುಗಳೊಂದಿಗೆ ಮಂಜೂರು ಮಾಡಬಹುದು."

**13. 25ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದಲ್ಲಿ,–

(i) 25ನೇ ಪ್ರಕರಣದ ಶೀರ್ಷಿಕೆಯಲ್ಲಿ, "ಅಥವಾ ಮಂಡಲ ಪಂಚಾಯಿತಿಯಲ್ಲಿ" ಎಂಬ ಪದಗಳಿಗೆ, "ಅಥವಾ ಗ್ರಾಮ ಪಂಚಾಯಿತಿಯಲ್ಲಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) 25ನೇ ಪ್ರಕರಣದಲ್ಲಿ, "ಪಟ್ಟಣ ಮಂಡಲಿ, ನೈರ್ಮಲ್ಯ ಮಂಡಲಿ ಅಥವಾ ಮಂಡಲ ಪಂಚಾಯತಿ" ಎಂಬ ಪದಗಳು ಬರುವ ಕಡೆಗಳಲ್ಲೆಲ್ಲ "ಪಟ್ಟಣ ಪಂಚಾಯಿತಿ ಅಥವಾ ಗ್ರಾಮ ಪಂಚಾಯಿತಿ" ಎಂಬ ಪದಗಳನ್ನು ಪ್ರತ್ಯಯಗಳೊಂದಿಗೆ ಪ್ರತಿಯೋಜಿಸತಕ್ಕದ್ದು;

(iii) (1)ನೇ ಉಪಪ್ರಕರಣದಲ್ಲಿ, (ಸಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಸಿ) ಕರ್ನಾಟಕ ಪುರಸಭೆಗಳ ಅಧಿನಿಯಮ, 1964ರ ಅಥವಾ ಕರ್ನಾಟಕ ಗ್ರಾಮಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993ರ ಅಡಿಯಲ್ಲಿ ರಚಿಸಲಾದ ಪಟ್ಟಣ ಪಂಚಾಯಿತಿ ಅಥವಾ ಗ್ರಾಮ ಪಂಚಾಯಿತಿಯ ಅಧಿಕಾರ ವ್ಯಾಪ್ತಿಯ ಒಳಗೆ ಯಾವುದೇ ಪ್ರದೇಶದಲ್ಲಿ ಇರುವ ಮತ್ತು ಅಂಥ ಪಟ್ಟಣ ಪಂಚಾಯಿತಿ ಅಥವಾ ಗ್ರಾಮ ಪಂಚಾಯಿತಿಯಲ್ಲಿ ನಿಹಿತವಾಗಿರುವ,"

**14. 26ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 26ನೇ ಪ್ರಕರಣದಲ್ಲಿ, "ಪಟ್ಟಣ ಮಂಡಲಿ, ನೈರ್ಮಲ್ಯ ಮಂಡಲಿ ಅಥವಾ ಮಂಡಲ ಪಂಚಾಯತಿ" ಎಂಬ ಪದಗಳು ಬರುವ ಕಡೆಗಳಲ್ಲೆಲ್ಲಾ, "ಪಟ್ಟಣ ಪಂಚಾಯತಿ ಅಥವಾ ಗ್ರಾಮ ಪಂಚಾಯತಿ" ಎಂಬ ಪದಗಳನ್ನು ಪ್ರತ್ಯಯಗಳೊಂದಿಗೆ ಪ್ರತಿಯೋಜಿಸತಕ್ಕದ್ದು.

**15. 27ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 27ನೇ ಪ್ರಕರಣದಲ್ಲಿ, ಶೀರ್ಷಿಕೆಯಲ್ಲಿ ಮತ್ತು (1)ನೇ ಉಪಪ್ರಕರಣದಲ್ಲಿ, "ಸಾರ್ವಜನಿಕ ಬೀದಿಯನ್ನು" ಎಂಬ ಪದಗಳ ತರುವಾಯ, "ಅಥವಾ ತಿರುವು ನಾಲೆಯನ್ನು" ಎಂಬ ಪದಗಳನ್ನು ಸೇರಿಸತಕ್ಕದ್ದು.

**16. 29ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ನೇ ಪ್ರಕರಣದಲ್ಲಿ, ಶೀರ್ಷಿಕೆಯಲ್ಲಿ ಮತ್ತು ಪ್ರಕರಣದಲ್ಲಿ, "ಪಟ್ಟಣ ಮಂಡಲಿ, ನೈರ್ಮಲ್ಯ ಮಂಡಲಿ ಅಥವಾ ಮಂಡಲ ಪಂಚಾಯತಿ" ಎಂಬ ಪದಗಳು ಬರುವ ಕಡೆಗಳಲ್ಲೆಲ್ಲಾ "ಪಟ್ಟಣ ಪಂಚಾಯತಿ ಅಥವಾ ಗ್ರಾಮ ಪಂಚಾಯತಿ" ಎಂಬ ಪದಗಳನ್ನು ಪ್ರತ್ಯಯಗಳೊಂದಿಗೆ ಪ್ರತಿಯೋಜಿಸತಕ್ಕದ್ದು.

**17. 32ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 32ಎ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ "1985ರ ಅಧಿನಿಯಮ ಸಂಖ್ಯೆ 20ರ" ಎಂಬ ಅಂಕಿಗಳು ಮತ್ತು ಪದಗಳಿಗೆ "1993ರ ಅಧಿನಿಯಮ ಸಂಖ್ಯೆ 14ರ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಯಾವುದೇ ಗೃಹನಿರ್ಮಾಣ ಯೋಜನೆ ಅಥವಾ ಭೂ ಅಭಿವೃದ್ಧಿ ಯೋಜನೆಯು ಪೂರ್ಣಗೊಂಡ ನಂತರ, ಸಂಬಂಧಪಟ್ಟ ನಿಗಮ, ನಗರ ಪುರಸಭಾ ಪರಿಷತ್, ಪಟ್ಟಣ ಪುರಸಭಾ ಪರಿಷತ್, ಪಟ್ಟಣ ಪಂಚಾಯತ್ ಅಥವಾ ಸಂದರ್ಭಾನುಸಾರವಾಗಿ ಗ್ರಾಮ ಪಂಚಾಯತ್‌ಗೆ ಬಡಾವಣೆಯನ್ನು ಹಸ್ತಾಂತರಿಸುವವರೆಗೆ, 29ನೇ ಪ್ರಕರಣದ ಅಡಿಯಲ್ಲಿ,–

(ಎ) ಪೌರ ನಿಗಮ, ನಗರ ಸಭೆ, ಪುರಸಭೆ, ಪಟ್ಟಣ ಪಂಚಾಯತ್ ಅಥವಾ ಗ್ರಾಮ ಪಂಚಾಯತ್ ಅಥವಾ ಯಾವುದೇ ಹೆಸರಿನಿಂದ ಕರೆಯಲಾಗುವ ಸ್ಥಾಯಿ ಸಮಿತಿಯ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು, ಕರ್ನಾಟಕ ಪುರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 22) ಅಥವಾ ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಅಥವಾ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ ಅಡಿಯಲ್ಲಿ ಮಂಡಲಿಯು ಚಲಾಯಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು;

(ಬಿ) ನಿಗಮದ ಕಮೀಷನರ್, ಮುನಿಸಿಪಲ್ ಕೌನ್ಸಿಲಿನ ಮುಖ್ಯಾಧಿಕಾರಿ, ಪಟ್ಟಣ ಪಂಚಾಯತ್ ಅಥವಾ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಅಥವಾ ಸಂದರ್ಭಾನುಸಾರವಾಗಿ ಗ್ರಾಮ ಪಂಚಾಯತ್‌ನ ಕಾರ್ಯದರ್ಶಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಗೃಹನಿರ್ಮಾಣ ಕಮೀಷನರನು ಚಲಾಯಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(ಸಿ) ಮಂಡಲಿಯು ಗೃಹನಿರ್ಮಾಣ ಯೋಜನೆ ಅಥವಾ ಭೂ ಅಭಿವೃದ್ಧಿ ಯೋಜನೆಯು ಪೂರ್ಣಗೊಂಡ ನಂತರ, ಸ್ಥಳೀಯ ಪ್ರಾಧಿಕಾರಕ್ಕೆ ಬಡಾವಣೆಯನ್ನು ಹಸ್ತಾಂತರಿಸುವವರೆಗೆ ಹಂಚಿಕೆ ಪಡೆದವರಿಂದ ಅಥವಾ ಖರೀದಿದಾರರಿಂದ ನಿರ್ವಹಣೆ ಮತ್ತು ಇತರ ಶುಲ್ಕಗಳನ್ನು ಸಂಗ್ರಹಿಸತಕ್ಕದ್ದು. ನಿರ್ವಹಣೆ ಮತ್ತು ಇತರ ಶುಲ್ಕಗಳು ಮಂಡಲಿಯು ನಿರ್ಧರಿಸಬಹುದಾಂತೆ ಇರತಕ್ಕದ್ದು "

**18. 33ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 33ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**33. ಒಪ್ಪಂದದ ಮೂಲಕ ಭೂಮಿಯನ್ನು ಖರೀದಿಸುವ, ಗುತ್ತಿಗೆಗೆ ನೀಡುವ, ವಿನಿಮಯ ಮಾಡಿಕೊಳ್ಳುವ ಅಥವಾ ಪಡೆಯುವ ಅಧಿಕಾರ.–** (1) ಮಂಡಲಿಯು, ಗೃಹನಿರ್ಮಾಣ ಯೋಜನೆಯ ಅಥವಾ ಭೂ ಅಭಿವೃದ್ಧಿ ಯೋಜನೆಯ ಅಥವಾ ಅಂಥ ಭೂಮಿಯಲ್ಲಿ ಯಾವುದೇ ಹಿತಾಸಕ್ತಿಯ ಉದ್ದೇಶಗಳಿಗಾಗಿ ಅಥವಾ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು, ಅದರಲ್ಲಿನ ಯಾವುದೇ ರೀತಿಯಲ್ಲಿ ಕಳೆದುಕೊಂಡ ಅಥವಾ ಅದನ್ನು ಹಸ್ತಕ್ಷೇಪಕ್ಕೆ ಗುರಿಪಡಿಸಿದ ಸಂಬಂಧದಲ್ಲಿನ ಯಾವುದೇ ಅಂಥ ಹಕ್ಕಿನ ಬಗ್ಗೆ ಮಾಲೀಕರಿಗೆ ಪರಿಹಾರ ನೀಡುವುದಕ್ಕಾಗಿ ಅಗತ್ಯವಿರುವ ಯಾವುದೇ ಭೂಮಿಯನ್ನು ಯಾವೊಬ್ಬ ವ್ಯಕ್ತಿಯಿಂದ ಖರೀದಿಸಲು ಅಥವಾ ಗುತ್ತಿಗೆಗೆ ಪಡೆದುಕೊಳ್ಳಲು ಅಥವಾ ವಿನಿಮಯ ಮಾಡಿಕೊಳ್ಳಲು ಒಪ್ಪಂದವನ್ನು ಮಾಡಿಕೊಳ್ಳಬಹುದು:

ಪರಂತು, ನಿಯಮಿಸಬಹುದಾದ ಅಂಥ ನಿಯಮಗಳಿಗೆ ಒಳಪಟ್ಟು, ಇನ್ನೂರಾ ಐವತ್ತು ಲಕ್ಷ ರೂಪಾಯಿಗಳಿಗಿಂತ ಹೆಚ್ಚು ಮೌಲ್ಯದ ಭೂಮಿಯನ್ನು ಅಥವಾ ಹತ್ತಕ್ಕಿಂತ ಹೆಚ್ಚು ವರ್ಷಗಳಿಗಾಗಿ ಗುತ್ತಿಗೆಯನ್ನು ಒಳಗೊಂಡ ಯೋಜನೆಯ ಸಂಬಂಧದಲ್ಲಿ ಪರಿಹಾರಕ್ಕೆ ಬದಲಾಗಿ ಭೂಮಿಯ ಆಧಾರದ ಮೇಲೆ ಖರೀದಿಸುವ ಅಥವಾ ವಿನಿಮಯ ಮಾಡಿಕೊಳ್ಳುವ ಅಥವಾ ಪಾಲು (sharing) ಮಾಡಿಕೊಳ್ಳುವ ಸಂದರ್ಭದಲ್ಲಿ, ರಾಜ್ಯ ಸರ್ಕಾರದ ಪೂರ್ವಾನುಮೋದನೆಯು ಅವಶ್ಯಕವಾಗಿರತಕ್ಕದ್ದು.

(2) ಮಂಡಲಿಯು, ಭೂ ಆರ್ಜನೆ, ಪುನರ್ವಸತಿ ಮತ್ತು ಪುನರ್‌ನಿರ್ಮಾಣದಲ್ಲಿ ನ್ಯಾಯಯುತ ಪರಿಹಾರ ಮತ್ತು ಪಾರದರ್ಶಕತೆಯ ಹಕ್ಕು ಅಧಿನಿಯಮ, 2013ರಲ್ಲಿ (2013ರ ಕೇಂದ್ರ ಅಧಿನಿಯಮ 30) ಉಪಬಂಧಿಸಲಾದ ಪ್ರಕ್ರಿಯೆಗನುಸಾರವಾಗಿ ಗೃಹನಿರ್ಮಾಣ ಯೋಜನೆ ಅಥವಾ ಭೂ ಅಭಿವೃದ್ಧಿ ಯೋಜನೆಯ ಜಾರಿಗಾಗಿ ರಾಜ್ಯ ಸರ್ಕಾರದ ಮೂಲಕ ಯಾವುದೇ ಭೂಮಿಯ ಅಥವಾ ಅದರಲ್ಲಿನ ಯಾವುದೇ ಹಿತಾಸಕ್ತಿಯ ಕಡ್ಡಾಯ ಆರ್ಜನೆಗಾಗಿ ಕ್ರಮಗಳನ್ನು ತೆಗೆದುಕೊಳ್ಳಬಹುದು.

(3) ಮಂಡಲಿಯು, ನಿಯಮಿಸಬಹುದಾದ ಅಂಥ ನಿಯಮಗಳಿಗೆ ಒಳಪಟ್ಟು, ಭೂಮಿಯನ್ನು ಸರ್ಕಾರಿ ಏಜನ್ಸಿಗಳ ಪರವಾಗಿ ಪಡೆದಿದ್ದಾಗ್ಯೂ, ಗೃಹನಿರ್ಮಾಣ ಯೋಜನೆ ಅಥವಾ ಭೂ ಅಭಿವೃದ್ಧಿ ಯೋಜನೆ, ನಿರ್ಮಾಣ ಯೋಜನೆಗಳು ಮತ್ತು ನಗರ ಮೂಲಸೌಲಭ್ಯ ಉದ್ದೇಶಗಳನ್ನು ಜಾರಿಗೊಳಿಸುವಲ್ಲಿ ರಸ್ತೆಗಳು, ವಿದ್ಯುಚ್ಛಕ್ತಿ, ನೀರು, ನಾಗರಿಕ ಸೌಲಭ್ಯಗಳಂಥ ಮೂಲಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಸಂಪರ್ಕ ರಸ್ತೆಗಳು, ಜಲ ಸಂಪನ್ಮೂಲಗಳು, ಚರಂಡಿ ನೀರು ಸಂಸ್ಕರಣೆ ಸ್ಥಾವರಗಳನ್ನು ಒದಗಿಸಲು ಪರಿಹಾರದ ಬದಲಾಗಿ ಭೂಮಿಯನ್ನು ಖರೀದಿಸುವ ಅಥವಾ ವಿನಿಮಯ ಮಾಡಿಕೊಳ್ಳುವ ಅಥವಾ ಹಂಚಿಕೊಳ್ಳುವ ಮೂಲಕ ಭೂಮಿಯನ್ನು ಪಡೆಯಬಹುದು."

**19. 52ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 52ನೇ ಪ್ರಕರಣದಲ್ಲಿ, (1)ನೇ ಮತ್ತು (3)ನೇ ಉಪಪ್ರಕರಣದಲ್ಲಿ "ಒಂದು ಲಕ್ಷ" ಎಂಬ ಪದಗಳಿಗೆ "ಐವತ್ತು ಲಕ್ಷ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**20. 64ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 64ನೇ ಪ್ರಕರಣದಲ್ಲಿ, "ಭೂ ಆರ್ಜನೆ ಅಧಿನಿಯಮ, 1894ಕ್ಕೆ" ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ, "ಭೂ ಆರ್ಜನೆ, ಪುನರ್ವಸತಿ ಮತ್ತು ಪುನರ್‌ನಿರ್ಮಾಣದಲ್ಲಿ ನ್ಯಾಯಯುತ ಪರಿಹಾರ ಮತ್ತು ಪಾರದರ್ಶಕತೆಯ ಹಕ್ಕು ಅಧಿನಿಯಮ, 2013ಕ್ಕೆ (2013ರ ಕೇಂದ್ರ ಅಧಿನಿಯಮ, ಸಂಖ್ಯೆ 30)" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು.

**21. 76ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 76ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**76ಎ. ಸಗಟು ಹಂಚಿಕೆಗಾಗಿ ಮಂಡಲಿಯ ಅಧಿಕಾರ.–** ಈ ಅಧಿನಿಯಮದಲ್ಲಿ ಅಥವಾ ಈ ಅಧಿನಿಯಮದ ಅಡಿಯಲ್ಲಿ ಮಂಜೂರು ಮಾಡಲಾದ ಭೂ ಅಭಿವೃದ್ಧಿ ಯೋಜನೆಯಲ್ಲಿ ಏನೇ ಒಳಗೊಂಡಿದ್ದರೂ, ಮಂಡಲಿಯು, ಅಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಹಾಗೂ ನಿಯಮಿಸಬಹುದಾದ ಪರಿಮಿತಿಗಳ ತರುವಾಯ,–

(i) ರಾಜ್ಯ ಸರ್ಕಾರಕ್ಕೆ; ಅಥವಾ

(ii) ಕೇಂದ್ರ ಸರ್ಕಾರಕ್ಕೆ; ಅಥವಾ

(iii) ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ಮಾಲೀಕತ್ವ ಹೊಂದಿದ ಅಥವಾ ಅದರ ನಿಯಂತ್ರದಲ್ಲಿರುವ ಯಾವುದೇ ನಿಗಮ, ನಿಕಾಯ ಅಥವಾ ಸಂಸ್ಥೆಗೆ

– ಯಾವುದೇ ಅಭಿವೃದ್ಧಿ ಯೋಜನೆಯ ಉದ್ದೇಶಕ್ಕಾಗಿ, ಅದು ಅಭಿವೃದ್ಧಿಪಡಿಸಿದ ನಿವೇಶನಗಳನ್ನು, ನಿರ್ಮಿಸಿದ ಅಥವಾ ಅದಕ್ಕೆ ಸೇರಿರುವ ಅಥವಾ ಅದರಲ್ಲಿ ನಿಹಿತವಾಗಿರುವ ಮನೆಗಳು ಅಥವಾ ಫ್ಲಾಟುಗಳನ್ನು ಮಾರಾಟ, ಗುತ್ತಿಗೆಯ ಮೂಲಕ ಅಥವಾ ಅನ್ಯಥಾ ರೀತಿಯಲ್ಲಿ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಸಗಟಾಗಿ ಹಂಚಿಕೆ ಮಾಡಬಹುದು"

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಈ ಮುಂದಿನವುಗಳಿಗಾಗಿ ಉಪಬಂಧವನ್ನು ಕಲ್ಪಿಸಲು, ಕರ್ನಾಟಕ ಗೃಹ ನಿರ್ಮಾಣ ಮಂಡಲಿ ಅಧಿನಿಯಮ, 1962ನ್ನು (1963ರ ಕರ್ನಾಟಕ ಅಧಿನಿಯಮ 10)ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:-

1. ಮಂಡಲಿಯನ್ನು ಪುನರ್ ರಚಿಸುವುದು;
2. ಮಂಡಲಿಯು ತಾನು ಅಭಿವೃದ್ಧಿಪಡಿಸಿದ ಲೇಔಟ್‌ನ್ನು ಹಸ್ತಾಂತರ ಮಾಡುವವರೆಗೂ ಸ್ಥಳೀಯ ಪ್ರಾಧಿಕಾರದ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಮತ್ತು ಅಂಥ ಲೇಔಟ್‌ನಲ್ಲಿ ನಿರ್ವಹಣೆ ಮತ್ತು ಇತರ ಚಾರ್ಜುಗಳನ್ನು ಸಂಗ್ರಹಿಸುವುದಕ್ಕೆ ಮಂಡಲಿಗೆ ಅಧಿಕಾರ ನೀಡುವುದು;
3. "ಭೂ ಆರ್ಜನಾ ಅಧಿನಿಯಮ, 1894ರ" ಬದಲಿಗೆ "ಭೂ ಆರ್ಜನೆ, ಪುನರ್ವಸತಿ ಮತ್ತು ಪುನರ್‌ನಿರ್ಮಾಣದಲ್ಲಿ ನ್ಯಾಯಯುತ ಪರಿಹಾರ ಮತ್ತು ಪಾರದರ್ಶಕತೆಯ ಹಕ್ಕು ಅಧಿನಿಯಮ, 2013ನ್ನು ಪ್ರತಿಯೋಜಿಸುವುದು;
4. "ಪಟ್ಟಣ ಮಂಡಲಿ, ನೈರ್ಮಲ್ಯ ಮಂಡಲಿ ಅಥವಾ ಮಂಡಲ ಪಂಚಾಯತಿ" ಪದಗಳಿಗೆ "ಪಟ್ಟಣ ಪಂಚಾಯಿತಿ ಅಥವಾ ಗ್ರಾಮ ಪಂಚಾಯಿತಿ" ಪದಗಳನ್ನು ಪ್ರತಿಯೋಜಿಸುವುದು;
5. ಸಾರ್ವಜನಿಕ ಖಾಸಗಿ ಸಹಭಾಗಿತ್ವ ವಸತಿ ಯೋಜನೆಗಳನ್ನು ಕೈಗೊಳ್ಳಲು ಮಂಡಲಿಗೆ ಅಧಿಕಾರ ನೀಡುವುದು;
6. ಐವತ್ತು ಲಕ್ಷಗಳ ಪ್ರಾಜೆಕ್ಟ್‌ಗಳನ್ನು ಕೈಗೊಳ್ಳುವ ಮಂಡಲಿಯ ಅಧಿಕಾರವನ್ನು ಎರಡು ನೂರು ಐವತ್ತು ಲಕ್ಷಗಳ ವರೆಗೆ ಹೆಚ್ಚಿಸುವುದು;
7. ಮಂಡಲಿಯು ತಾನು ಅಭಿವೃದ್ಧಿಪಡಿಸಿದ ಮನೆಗಳನ್ನು, ನಿವೇಶನಗಳನ್ನು ಅಥವಾ ಫ್ಲ್ಯಾಟುಗಳನ್ನು ರಾಜ್ಯ ಸರ್ಕಾರ, ಕೇಂದ್ರ ಸರ್ಕಾರ, ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮ ನಿಕಾಯ, ಸಂಸ್ಥೆಗೆ ಒಟ್ಟಾರೆ ಹಂಚಿಕೆಯನ್ನು ಮಾಡುವುದಕ್ಕಾಗಿ ಅಧಿಕಾರ ನೀಡುವುದು; ಮತ್ತು
8. ಕೆಲವು ಆನುಷಂಗಿಕ ಅಥವಾ ಪ್ರಾಸಂಗಿಕ ತಿದ್ದುಪಡಿಗಳನ್ನು ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತ ಜ್ಞಾಪನ ಪತ್ರ

| | |
|---|---|
| ಖಂಡ 3 | (1) 2ನೇ ಪ್ರಕರಣದಲ್ಲಿ ಸೇರಿಸಲು ಉದ್ದೇಶಿಸಲಾದ (ಎಚ್-1) ಖಂಡವು, ಜಂಟಿ ಉದ್ಯಮ ಯೋಜನೆಗಳಿಗಾಗಿ ನಿಬಂಧನೆಗಳು ಮತ್ತು ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(2) 2ನೇ ಪ್ರಕರಣದಲ್ಲಿ ಸೇರಿಸಲು ಉದ್ದೇಶಿಸಲಾದ (ಎನ್-1) ಖಂಡವು, ಸಾರ್ವಜನಿಕ ಖಾಸಗಿ ಸಹಭಾಗಿತ್ವ ಯೋಜನೆಗಳಿಗಾಗಿ ಖಾಸಗಿ ಪಕ್ಷಕಾರ ಮತ್ತು ಮಂಡಲಿಯ ನಡುವೆ ಕರಾರಿನ ಮಾನದಂಡಗಳನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 9 | 15ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಸೇರಿಸಲು ಉದ್ದೇಶಿಸಲಾದ (ಸಿ) ಖಂಡವು, ಜಂಟಿ ಉದ್ಯಮ ಅಥವಾ ಸಾರ್ವಜನಿಕ ಖಾಸಗಿ ಸಹಭಾಗಿತ್ವ ವ್ಯವಸ್ಥೆಗಳ ಅಂದಾಜು ವೆಚ್ಚಕ್ಕಾಗಿ ನಿಬಂಧನೆಗಳು ಮತ್ತು ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

| | |
|---|---|
| ಖಂಡ 10 | ಪ್ರತಿಯೋಜಿಸಲು ಉದ್ದೇಶಿಸಲಾದ 17ನೇ ಪ್ರಕರಣವು ಜಂಟಿ ಉದ್ಯಮ ಅಥವಾ ಸಾರ್ವಜನಿಕ ಖಾಸಗಿ ಸಹಭಾಗಿತ್ವ ವ್ಯವಸ್ಥೆಗಳ ಅಡಿಯಲ್ಲಿ ಮಂಡಲಿಯು ಕೈಗೊಳ್ಳಬೇಕಾದ ಯೋಜನೆಗಳ ಸಂಬಂಧದಲ್ಲಿಯ ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 18 | ಪ್ರತಿಯೋಜಿಸಲು ಉದ್ದೇಶಿಸಲಾದ 33ನೇ ಪ್ರಕರಣದ,–<br>(ಎ) (1)ನೇ ಉಪಪ್ರಕರಣವು,–<br>(i) ವಸತಿ ಯೋಜನೆಗಾಗಿ ಅಥವಾ ಭೂ ಅಭಿವೃದ್ಧಿ ಯೋಜನೆಗಾಗಿ ಅಥವಾ ಯಾವುದೇ ರೀತಿಯಲ್ಲಿ ಕಳೆದುಕೊಂಡ ಸಂಬಂಧದಲ್ಲಿ ಯಾವುದೇ ಅಂಥ ಹಕ್ಕನ್ನು ಮಾಲೀಕರಿಗೆ ಪರಿಹಾರ ನೀಡುವುದಕ್ಕಾಗಿ ಒಪ್ಪಂದದ ಮೂಲಕ ಮಂಡಲಿಯು ಭೂಮಿಯ ಖರೀದಿ, ಗುತ್ತಿಗೆ, ವಿನಿಮಯ ಅಥವಾ ಸಂಗ್ರಹ ಮಾಡಬಹುದಾದುದಕ್ಕೆ ಒಳಪಡುವ ನಿಬಂಧನೆಗಳು ಮತ್ತು ಷರತ್ತುಗಳು;<br>(ii) ಪರಂತುಕದಲ್ಲಿ, ಎರಡು ನೂರಾ ಐವತ್ತು ಲಕ್ಷ ರೂಪಾಯಿಗಳಿಗಿಂತ ಹೆಚ್ಚಿರುವ ಅಥವಾ ಹತ್ತು ವರ್ಷಗಳಿಗಿಂತ ಹೆಚ್ಚಿನ ಅವಧಿಯ ಗುತ್ತಿಗೆ ಇರುವ ಭೂಮಿಯು ಒಳಗೊಂಡಂಥ ಯೋಜನೆಯ ಸಂಬಂಧದಲ್ಲಿ ಪರಿಹಾರದ ಬದಲಾಗಿ ಭೂಮಿಯ ಖರೀದಿ ಅಥವಾ ವಿನಿಮಯ ಅಥವಾ ಪಾಲುದಾರಿಕೆಯ ಸಂಬಂಧದಲ್ಲಿ ರಾಜ್ಯ ಸರ್ಕಾರದ ಪೂರ್ವಾನುಮೋದನೆಯ ರೀತಿಯನ್ನು,–<br>–ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(ಬಿ) (3)ನೇ ಉಪಪ್ರಕರಣವು, ಸಂಪರ್ಕ ರಸ್ತೆಗಳು, ಜಲ ಸಂಪನ್ಮೂಲಗಳು, ಚರಂಡಿ ನೀರು ಸಂಸ್ಕರಣೆ ಸ್ಥಾವರಗಳು ಮತ್ತು ಇತರ ಯೋಜನೆಗಳನ್ನು ಒದಗಿಸಲು ಆರ್ಜಿಸಿದ ಭೂಮಿಗಾಗಿ ಅಥವಾ ಭೂಮಿಯ ಖರೀದಿ ಅಥವಾ ವಿನಿಮಯ ಅಥವಾ ಪಾಲುದಾರಿಕೆಯ ಮೂಲಕ ಪರಿಹಾರಕ್ಕೆ ಬದಲಾಗಿ ಭೂಮಿಯ ಹಂಚಿಕೆಯ ವಿಧಾನದ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 21 | ಸೇರಿಸಲು ಉದ್ದೇಶಿಸಲಾದ 76ಎ ಪ್ರಕರಣವು ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಮಂಡಲಿಯು ಮಾಡಬೇಕಾದ ಒಟ್ಟಾರೆ ಹಂಚಿಕೆಯು ಯಾವ ನಿರ್ಬಂಧಗಳು, ಷರತ್ತುಗಳು ಮತ್ತು ಪರಿಮಿತಿಗಳಿಗೆ ಒಳಪಡತಕ್ಕದ್ದು ಎಂಬುದರ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಸಿದ್ದರಾಮಯ್ಯ**
ಮುಖ್ಯಮಂತ್ರಿಗಳು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಗೃಹ ನಿರ್ಮಾಣ ಮಂಡಲಿ ಅಧಿನಿಯಮ, 1962ರ (1963ರ ಕರ್ನಾಟಕ ಅಧಿನಿಯಮ 10)**

**ಉದ್ಧೃತ ಭಾಗ**

**XX XX XX**

**ವಸತಿ ಅವಶ್ಯಕತೆಯ ಬಗ್ಗೆ ವ್ಯವಹರಿಸಲು ಮತ್ತು ವಸತಿಯ ಅಗತ್ಯವನ್ನು ಈಡೇರಿಸಲು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ವ್ಯವಸ್ಥೆ ಮಾಡುವ ಅಧಿನಿಯಮ.**

ವಸತಿ ಅವಶ್ಯಕತೆಯ ಬಗ್ಗೆ ವ್ಯವಹರಿಸುವ ಮತ್ತು ವಸತಿಯ ಅಗತ್ಯವನ್ನು ಈಡೇರಿಸುವ ಉದ್ದೇಶಕ್ಕಾಗಿ ಅವಶ್ಯಕವಾದಂಥ ಕ್ರಮಗಳನ್ನು ಕೈಗೊಳ್ಳುವುದು, ಯೋಜನೆಗಳನ್ನು ರೂಪಿಸುವುದು ಮತ್ತು ಕಾಮಗಾರಿಗಳನ್ನು ನಿರ್ವಹಿಸುವುದು ವಿಹಿತವಾಗಿರುವುದರಿಂದ ಮತ್ತು ಆ ಉದ್ದೇಶದಿಂದ ಕರ್ನಾಟಕ ರಾಜ್ಯ ಕ್ಕಾಗಿ ಒಂದು ಮಂಡಲಿಯನ್ನು ಸ್ಥಾಪಿಸುವುದು ಮತ್ತು ಇತರ ಕೆಲವು ಉಪಬಂಧಗಳನ್ನು ಕಲ್ಪಿಸುವುದು ಅವಶ್ಯಕವಾಗಿರುವುದರಿಂದ;

ಭಾರತದ ಗಣರಾಜ್ಯದ ಹದಿಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:–

**XX XX XX**

**3. ಮಂಡಲಿಯ ರಚನೆ.–** **XX XX XX**

(2) ಮಂಡಲಿಯು, ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರತಕ್ಕುದು, ಎಂದರೆ:– **XX XX XX**

(ಬಿ) ಸರ್ಕಾರದ ಕಾರ್ಯದರ್ಶಿ – ಗೃಹ ನಿರ್ಮಾಣದ ಪ್ರಭಾರಿ, ಕರ್ನಾಟಕ ಸರ್ಕಾರ;

**XX XX XX**

(ಇ) ನಗರ ಯೋಜನಾ ನಿರ್ದೇಶಕರು, ಕರ್ನಾಟಕ ಸರ್ಕಾರ;

(ಎಫ್) ಅಧ್ಯಕ್ಷರು ಮತ್ತು ಕಾರ್ಯನಿರ್ವಹಣಾ ನಿರ್ದೇಶಕರು, ಕರ್ನಾಟಕ ಭೂ ಸೇನಾ ನಿಗಮ;

**XX XX XX**

(ಐ) ರಾಜ್ಯ ಸರ್ಕಾರವು ನೇಮಕ ಮಾಡಿದ ಐದು ಮಂದಿ ಸರ್ಕಾರೇತರ ಸದಸ್ಯರು, 2[ಆ ಪೈಕಿ ಇಬ್ಬರು ಮಹಿಳೆಯರು ಇರತಕ್ಕದ್ದು; **XX XX XX**

(4) ಈ ಅಧಿನಿಯಮದ ಮತ್ತು ಭೂ ಆರ್ಜನಾ ಅಧಿನಿಯಮ, 1894ರ ಉದ್ದೇಶಕ್ಕಾಗಿ ಮಂಡಲಿಯನ್ನು ಸ್ಥಳೀಯ ಪ್ರಾಧಿಕಾರವೆಂದು ಭಾವಿಸತಕ್ಕುದು.

**XX XX XX**

**6. ಪದಾವಧಿ ಮತ್ತು ಸೇವಾ ಷರತ್ತುಗಳು.–** (1) ಅಧ್ಯಕ್ಷನು ಮತ್ತು ಇತರ ಪ್ರತಿಯೊಬ್ಬ ಸದಸ್ಯರು ರಾಜ್ಯ ಸರ್ಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು.

**XX XX XX**

**7. ಸದಸ್ಯರ ಸ್ಥಾನ ತೆರವಾಗುವುದು.–** ಅಧ್ಯಕ್ಷರು ಅಥವಾ ಯಾರೇ ಇತರ ಸದಸ್ಯರು,– **XX XX XX**

(ಸಿ) ಮಂಡಲಿಯ ಅನುಮತಿಯಿಲ್ಲದೆ ಮಂಡಲಿಯ ಎಲ್ಲಾ ಸಭೆಗಳಿಗೆ ಮೂರು ನಿರಂತರ ಸಾಮಾನ್ಯ ಸಭೆಗಳಿಗೆ ಗೈರುಹಾಜರಾದರೆ,

–ಅವರು ಅಧ್ಯಕ್ಷರಾಗಿರುವುದು ಅಥವ ಸದಸ್ಯರಾಗಿರುವುದು ನಿಂತುಹೋಗತಕ್ಕದ್ದು.

**XX XX XX**

**8. ಖಾಲಿಸ್ಥಾನವನ್ನು ಸಾಧ್ಯವಾದಷ್ಟು ಬೇಗನೆ ಭರ್ತಿಮಾಡುವುದು.–** (1) ಅಧ್ಯಕ್ಷರ ಅಥವಾ ಸದಸ್ಯನ ಪದದಲ್ಲಿ ಉಂಟಾದ ಯಾವುದೇ ಖಾಲಿಸ್ಥಾನವನ್ನು ಸಾಧ್ಯವಾದಷ್ಟು ಬೇಗನೆ ಭರ್ತಿಮಾಡತಕ್ಕದ್ದು.

(2) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಮುಂದುವರಿಯುತ್ತಿರುವ ಸದಸ್ಯರು, ಸ್ಥಾನವು ಹಾಗೆ ಖಾಲಿ ಇರುವಾಗ ಯಾವುದೇ ಸ್ಥಾನವು ಖಾಲಿಯಾಗಿರದಿದ್ದರೆ ಹೇಗೋ ಹಾಗೆ ಕಾರ್ಯನಿರ್ವಹಿಸಬಹುದು.

**XX XX XX**

**10. ಗೃಹನಿರ್ಮಾಣ ಆಯುಕ್ತರು, ಮುಖ್ಯ ಇಂಜಿನಿಯರ್ ಮತ್ತು ಕಾರ್ಯದರ್ಶಿಯ ನೇಮಕಾತಿ ಮತ್ತು ಅವರ ಅಧಿಕಾರಗಳು.–**

**XX XX XX**

(2) ರಾಜ್ಯ ಸರ್ಕಾರವು ಮಂಡಲಿಗೆ ತನ್ನ ಅಧಿಕಾರಿಗಳ ಪೈಕಿಯಿಂದ ಒಬ್ಬ ಮುಖ್ಯ ಇಂಜಿನಿಯರನ್ನು ಮತ್ತು ಒಬ್ಬ ಕಾರ್ಯದರ್ಶಿಯನ್ನು ನೇಮಕಮಾಡತಕ್ಕದ್ದು. **XX XX XX**

(7) ಮುಖ್ಯ ಇಂಜಿನಿಯರನು ಮತ್ತು ಕಾರ್ಯದರ್ಶಿಯು, ಸರ್ಕಾರದ ಯಾವುದೇ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು ಮಂಡಲಿಯು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು. 10ಎ. ಮಂಡಲಿಯ ಅಧಿಕಾರಿಗಳು

**XX XX XX**

**15. ಕರಾರುಗಳನ್ನು ಕಾರ್ಯಗತಗೊಳಿಸುವುದು.–** (1) ಪ್ರತಿಯೊಂದು ಕರಾರನ್ನು ಗೃಹನಿರ್ಮಾಣ ಕಮೀಷನರನು ಮಂಡಲಿಯ ಪರವಾಗಿ ಮಾಡಿಕೊಳ್ಳತಕ್ಕದ್ದು:

ಪರಂತು,–

(ಎ) ಐವತ್ತು ಲಕ್ಷ ರೂಪಾಯಿ ಮತ್ತು ಅದಕ್ಕೂ ಹೆಚ್ಚಿನ ವೆಚ್ಚವನ್ನೊಳಗೊಂಡ ಯಾವುದೇ ಕರಾರನ್ನು ರಾಜ್ಯ ಸರ್ಕಾರದಿಂದ ಮೊದಲೇ ಮಂಜೂರಾತಿ ಪಡೆಯದೆ ಮಾಡಿಕೊಳ್ಳತಕ್ಕದ್ದಲ್ಲ.

(ಬಿ) (i) ಹತ್ತು ಲಕ್ಷ ರೂಪಾಯಿ ಮತ್ತು ಅದಕ್ಕಿಂತ ಹೆಚ್ಚಿನ ವೆಚ್ಚವನ್ನೊಳಗೊಂಡ ಯಾವುದೇ ಕರಾರನ್ನು (ಎ) ಖಂಡಕ್ಕೆ ಒಳಪಟ್ಟು, ಮಂಡಲಿಯಿಂದ ಮೊದಲೇ ಮಂಜೂರಾತಿ ಪಡೆಯದೆ ಮಾಡಿಕೊಳ್ಳತಕ್ಕದ್ದಲ್ಲ.

(ii) ಹತ್ತು ಲಕ್ಷ ರೂಪಾಯಿ ಮತ್ತು ಅದಕ್ಕಿಂತ ಹೆಚ್ಚಿನ ವೆಚ್ಚವನ್ನೊಳಗೊಂಡ ಯಾವುದೇ ಅಂದಾಜನ್ನು ಅಥವಾ ಟೆಂಡರನ್ನು (ಎ) ಖಂಡಕ್ಕೆ ಒಳಪಟ್ಟು, ಮಂಡಲಿಯಿಂದ ಮೊದಲೇ ಮಂಜೂರಾತಿ ಪಡೆಯದೆ ಮಂಜೂರು ಮಾಡತಕ್ಕುದಲ್ಲ ಅಥವಾ ಅಂಗೀಕರಿಸತಕ್ಕದ್ದಲ್ಲ.

**XX XX XX**

**17. ಗೃಹನಿರ್ಮಾಣ ಯೋಜನೆಗಳನ್ನು ಮತ್ತು ಭೂ ಅಭಿವೃದ್ಧಿ ಯೋಜನೆಗಳನ್ನು ಕೈಗೊಳ್ಳುವುದು ಮಂಡಲಿಯ ಕರ್ತವ್ಯವಾಗಿರುವುದು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ರಾಜ್ಯ ಸರ್ಕಾರದ ನಿಯಂತ್ರಣಕ್ಕೆ ಒಳಪಟ್ಟು, ಮಂಡಲಿಯು, ತಾನು ಕಾಲಕಾಲಕ್ಕೆ ಅವಶ್ಯವೆಂದು ಭಾವಿಸಬಹುದಾದಂಥ ಅಥವಾ ರಾಜ್ಯ ಸರ್ಕಾರವು ಅದಕ್ಕೆ ವಹಿಸಿಕೊಡಬಹುದಾದಂಥ ಗೃಹ ನಿರ್ಮಾಣ ಯೋಜನೆಗಳನ್ನು ಮತ್ತು ಭೂ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವುದಕ್ಕಾಗಿ ಮತ್ತು ಕಾರ್ಯಗತಗೊಳಿಸುವುದಕ್ಕಾಗಿ ವೆಚ್ಚ ವಹಿಸಬಹುದು ಮತ್ತು ಯಾವುದೇ ಪ್ರದೇಶದಲ್ಲಿ ಕಾಮಗಾರಿಗಳನ್ನು ಕೈಗೊಳ್ಳಬಹುದು.

**XX XX XX**

**19. ವಾರ್ಷಿಕ ಗೃಹನಿರ್ಮಾಣ ಕಾರ್ಯಕ್ರಮ ಮತ್ತು ಭೂ ಅಭಿವೃದ್ಧಿ ಕಾರ್ಯಕ್ರಮ, ಬಜೆಟ್ಟು ಮತ್ತು ಸಿಬ್ಬಂದಿ ವಿವರ ಸಿದ್ಧಪಡಿಸುವುದು ಮತ್ತು ಸಲ್ಲಿಸುವುದು.–** (1) ಪ್ರತಿ ವರ್ಷ ಡಿಸೆಂಬರ್ ಮೊದಲನೇ ದಿನಕ್ಕೆ ಮುಂಚೆ ಮಂಡಲಿಯು,–

(i) ಒಂದು ಕಾರ್ಯಕ್ರಮವನ್ನು,

(ii) ಮುಂದಿನ ವರ್ಷದ ಬಜೆಟ್ಟನ್ನು,

(iii) ಈಗಾಗಲೇ ನಿಯೋಜಿತರಾಗಿರುವ ಮತ್ತು ಮುಂದಿನ ವರ್ಷದ ಅವಧಿಯಲ್ಲಿ ನಿಯೋಜಿಸಿಕೊಳ್ಳಬೇಕಾದ ಅಧಿಕಾರಿಗಳ ಮತ್ತು ನೌಕರರ ವಿವರ ಪಟ್ಟಿಯನ್ನು

– ನಿಯಮಿಸಬಹುದಾದಂಥ ನಮೂನೆಯಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**XX XX XX**

**20. ಕಾರ್ಯಕ್ರಮ, ಬಜೆಟ್ಟು ಮತ್ತು ಸಿಬ್ಬಂದಿ ವಿವರ ಇವುಗಳಿಗೆ ಮಂಜೂರಾತಿ.–** ರಾಜ್ಯ ಸರ್ಕಾರವು, ತನಗೆ ಕಳುಹಿಸಿದ ಕಾರ್ಯಕ್ರಮ, ಬಜೆಟ್ಟು ಮತ್ತು ಅಧಿಕಾರಿಗಳ ಮತ್ತು ನೌಕರರ ಸಿಬ್ಬಂದಿಯ ವಿವರಪಟ್ಟಿಯನ್ನು, ತಾನು ಸೂಕ್ತವೆಂದು ಭಾವಿಸುವಂಥ ಮಾರ್ಪಾಟುಗಳೊಂದಿಗೆ ಮಂಜೂರು ಮಾಡಬಹುದು.

**XX XX XX**

**25. ಗೃಹನಿರ್ಮಾಣ ಯೋಜನೆಯ ಅಥವಾ ಭೂ ಅಭಿವೃದ್ಧಿ ಯೋಜನೆಯ ಉದ್ದೇಶಕ್ಕಾಗಿ ನಿಗಮದಲ್ಲಿ ಮುನ್ಸಿಪಲ್ ಕೌನ್ಸಿಲ್‌ನಲ್ಲಿ ಅಥವಾ ಮಂಡಲ ಪಂಚಾಯಿತಿಯಲ್ಲಿ ನಿಹಿತವಾದ ಜಮೀನನ್ನು ಮಂಡಲಿಗೆ ವರ್ಗಾಯಿಸುವುದು.–** (1) (ಎ) ಒಂದು ನಗರದಲ್ಲಿರುವ ಮತ್ತು ಅಂಥ ನಗರ ಪೌರ ನಿಗಮದಲ್ಲಿ ನಿಹಿತವಾಗಿರುವ; ಅಥವಾ

(ಬಿ) ಪುರಸಭೆಗಳಿಗೆ ಸಂಬಂಧಿಸಿದ ಯಾವುದೇ ಕಾನೂನಿನ ಮೇರೆಗೆ ರಚಿಸಿದ ಪುರಸಭೆಯ ಯಾವುದೇ ಭಾಗದಲ್ಲಿ ಇರುವ ಮತ್ತು ಪುರಸಭಾ ಪರಿಷತ್ತಿನಲ್ಲಿ, ಪುರಸಭಾ ಸಮಿತಿಯಲ್ಲಿ ಅಥವಾ ಆ ಪುರಸಭೆಯ ಇತರ ಪುರಸಭಾ ನಿಕಾಯದಲ್ಲಿ ನಿಹಿತವಾಗಿರುವ; ಅಥವಾ

(ಸಿ) ಪಟ್ಟಣ ಮಂಡಲಿಗಳಿಗೆ, ನೈರ್ಮಲ್ಯ ಮಂಡಲಿಗಳಿಗೆ ಅಥವಾ ಮಂಡಲ ಪಂಚಾಯತಿಗಳಿಗೆ ಸಂಬಂಧಿಸಿದ ಯಾವುದೇ ಕಾನೂನಿನ ಮೇರೆಗೆ ರಚಿಸಿದ ಪಟ್ಟಣ ಮಂಡಲಿಯ, ನೈರ್ಮಲ್ಯ ಮಂಡಲಿಯ ಅಥವಾ ಮಂಡಲ ಪಂಚಾಯಿತಿಯ ಅಧಿಕಾರ ವ್ಯಾಪ್ತಿಯೊಳಗೆ ಸೇರಿಸಲಾದ ಯಾವುದೇ ಪ್ರದೇಶದಲ್ಲಿರುವ ಮತ್ತು ಅಂಥ ಪಟ್ಟಣ ಮಂಡಲಿಯಲ್ಲಿ, ನೈರ್ಮಲ್ಯ ಮಂಡಲಿಯಲ್ಲಿ ಅಥವಾ ಮಂಡಲ ಪಂಚಾಯತಿಯಲ್ಲಿ ನಿಹಿತವಾಗಿರುವ

– ಯಾವುದೇ ಬೀದಿಯು, ಚೌಕವು ಅಥವಾ ಇತರ ಜಮೀನು ಅಥವಾ ಅದರ ಯಾವುದೇ ಭಾಗವು, ರಾಜ್ಯ ಸರ್ಕಾರವು ಮಂಜೂರು ಮಾಡಿದ ಕಾರ್ಯಕ್ರಮದಲ್ಲಿ ಸೇರಿದ ಪ್ರದೇಶದೊಳಗೆ ಇದ್ದರೆ ಮತ್ತು ಅಂಥ ಗೃಹನಿರ್ಮಾಣ ಯೋಜನೆಯ ಅಥವಾ ಭೂ ಅಭಿವೃದ್ಧಿ ಯೋಜನೆಯ ಉದ್ದೇಶಗಳಿಗಾಗಿ ಅಗತ್ಯವಿದ್ದರೆ, ಮಂಡಲಿಯು ತದನುಸಾರವಾಗಿ, ಸಂದರ್ಭಾನುಸಾರ, ಆ ನಿಗಮ, ಪುರಸಭಾ ಪರಿಷತ್ತಿಗೆ, ಪುರಸಭಾ ಸಮಿತಿಗೆ ಅಥವಾ ಪುರಸಭಾ ನಿಕಾಯಕ್ಕೆ, ಪಟ್ಟಣ ಮಂಡಲಿಗೆ, ನೈರ್ಮಲ್ಯ ಮಂಡಲಿಗೆ ಅಥವಾ 3[ಮಂಡಲ ಪಂಚಾಯತಿಗೆ ನೋಟೀಸು ಕೊಡತಕ್ಕದ್ದು.

**XX XX XX**

**26. ಮಂಡಲಿಯಲ್ಲಿ ನಿಹಿತವಾಗಿರುವ ಜಮೀನಿಗೆ ಸಂಬಂಧಪಟ್ಟಂತೆ ನಷ್ಟ ಪರಿಹಾರ.–** (1) 25ನೇ ಪ್ರಕರಣದ ಉಪಬಂಧಗಳ ಮೇರೆಗೆ ಯಾವುದೇ ಜಮೀನು ಮಂಡಲಿಯಲ್ಲಿ ನಿಹಿತವಾಗಿದ್ದರೆ ಮತ್ತು ಆ ಜಮೀನು 29ನೇ ಪ್ರಕರಣದ ಮೇರೆಗೆ ಬೀದಿಯ ಭಾಗವಾಗಿ ಅಥವಾ ಬಹಿರಂಗ ಸ್ಥಳವಾಗಿ, ಸಂದರ್ಭಾನುಸಾರ, ಪೌರ ನಿಗಮದಲ್ಲಿ, ಪುರಸಭಾ ಪರಿಷತ್ತಿನಲ್ಲಿ, ಪುರಸಭಾ ಸಮಿತಿಯಲ್ಲಿ ಅಥವಾ ಪುರಸಭಾ ನಿಕಾಯದಲ್ಲಿ, ಪಟ್ಟಣ ಮಂಡಲಿಯಲ್ಲಿ, ನೈರ್ಮಲ್ಯ ಮಂಡಲಿಯಲ್ಲಿ ಅಥವಾ ಮಂಡಲ ಪಂಚಾಯತಿಯಲ್ಲಿ ಮತ್ತೆ ನಿಹಿತಗೊಳ್ಳುವವರೆಗೆ ಅದನ್ನು ಮಂಡಲಿಯು ತನ್ನಲ್ಲಿಯೇ ಇಟ್ಟುಕೊಳ್ಳತಕ್ಕುದೆಂದು ಮಂಡಲಿಯು ಘೋಷಣೆ ಮಾಡಿದ್ದರೆ, ಆ ಜಮೀನಿಗೆ ಸಂಬಂಧಿಸಿ ಮಂಡಲಿಯಿಂದ ಪೌರ ನಿಗಮಕ್ಕೆ, ಪುರಸಭಾ ಪರಿಷತ್ತಿಗೆ, ಪುರಸಭಾ ಸಮಿತಿಗೆ ಅಥವಾ ಪುರಸಭಾ ನಿಕಾಯಕ್ಕೆ, ಪಟ್ಟಣ ಮಂಡಲಿಗೆ, ನೈರ್ಮಲ್ಯ ಮಂಡಲಿಗೆ ಅಥವಾ ಮಂಡಲ ಪಂಚಾಯತಿಗೆ ಯಾವುದೇ ನಷ್ಟಪರಿಹಾರವು ಸಂದಾಯವಾಗತಕ್ಕದ್ದಲ್ಲ.

(2) 25ನೇ ಪ್ರಕರಣದ ಮೇರೆಗೆ ಯಾವುದೇ ಜಮೀನು ಮಂಡಲಿಯಲ್ಲಿ ನಿಹಿತವಾಗಿದ್ದರೆ ಮತ್ತು ಆ ಜಮೀನಿಗೆ ಸಂಬಂಧಿಸಿ (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಘೋಷಣೆಯನ್ನು ಮಾಡಿರದಿದ್ದರೆ ಮಂಡಲಿಯು, ಸಂದರ್ಭಾನುಸಾರ ಪೌರ ನಿಗಮಕ್ಕೆ, ಪುರಸಭಾ ಪರಿಷತ್ತಿಗೆ, ಪುರಸಭಾ ಸಮಿತಿಗೆ ಅಥವಾ ಪುರಸಭಾ ನಿಕಾಯಕ್ಕೆ, ಪಟ್ಟಣ ಮಂಡಲಿಗೆ, ನೈರ್ಮಲ್ಯ ಮಂಡಲಿಗೆ ಅಥವಾ ಮಂಡಲ ಪಂಚಾಯತಿಗೆ, ಅಂಥ ಜಮೀನಿನ ಮೌಲ್ಯಕ್ಕೆ ಸಮನಾದ ಮೊತ್ತವನ್ನು ನಷ್ಟ ಪರಿಹಾರವಾಗಿ ಸಂದಾಯ ಮಾಡತಕ್ಕದ್ದು.

(3) ಮಂಡಲಿಯು, ಯಾವುದೇ ಸಂದರ್ಭದಲ್ಲಿ (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಜಮೀನಿಗೆ ಸಂಬಂಧಿಸಿ ಘೋಷಣೆಯನ್ನು ಮಾಡಿದ್ದು ಮಂಡಲಿಯು, ಆ ಜಮೀನು ಸಂದರ್ಭಾನುಸಾರ ಪೌರ ನಿಗಮದಲ್ಲಿ, ಪುರಸಭಾ ಪರಿಷತ್ತಿನಲ್ಲಿ, ಪುರಸಭಾ ಸಮಿತಿಯಲ್ಲಿ ಅಥವಾ ಪುರಸಭಾ ನಿಕಾಯದಲ್ಲಿ, ಪಟ್ಟಣ ಮಂಡಲಿಯಲ್ಲಿ, ನೈರ್ಮಲ್ಯ ಮಂಡಲಿಯಲ್ಲಿ ಅಥವಾ ಮಂಡಲ ಪಂಚಾಯತಿಯಲ್ಲಿ ಮತ್ತೆ ನಿಹಿತವಾಗದ ಹಾಗೆ ಆ ಘೋಷಣೆಯ ನಿಬಂಧನೆಗಳಿಗೆ ವಿರುದ್ಧವಾಗಿ ಅದನ್ನು ತನ್ನಲ್ಲಿ ಇಟ್ಟುಕೊಂಡರೆ ಅಥವಾ ವಿಲೆ ಮಾಡಿದರೆ ಆ ಮಂಡಲಿಯು ಆ ಜಮೀನಿಗೆ ಸಂಬಂಧಿಸಿ (2)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಆ ಪೌರ ನಿಗಮಕ್ಕೆ, ಪುರಸಭಾ ಪರಿಷತ್ತಿಗೆ, ಪುರಸಭಾ ಸಮಿತಿಗೆ ಅಥವಾ ಪುರಸಭಾ ನಿಕಾಯಕ್ಕೆ, ಪಟ್ಟಣ ಮಂಡಲಿಗೆ, ನೈರ್ಮಲ್ಯ ಮಂಡಲಿಗೆ ಅಥವಾ ಮಂಡಲ ಪಂಚಾಯತಿಗೆ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕದ್ದು.

**XX XX XX**

**27. ಮಂಡಲಿಯಲ್ಲಿ ನಿಹಿತವಾಗಿರುವ ಸಾರ್ವಜನಿಕ ಬೀದಿಯನ್ನು ತಿರುಗಿಸಲು ಅಥವಾ ಮುಚ್ಚಲು ಅದರ ಅಧಿಕಾರ.–** (1) ಮಂಡಲಿಯು, ತನ್ನಲ್ಲಿ ನಿಹಿತವಾಗಿರುವ ಯಾವುದೇ ಸಾರ್ವಜನಿಕ ಬೀದಿಯನ್ನು ಅಥವಾ ಅದರ ಯಾವುದೇ ಭಾಗವನ್ನು ತಿರುಗಿಸಬಹುದು, ಮಾರ್ಗಪಲ್ಲಟಗೊಳಿಸಬಹುದು, ಸಾರ್ವಜನಿಕ ಬಳಕೆಯನ್ನು ನಿಲ್ಲಿಸಬಹುದು ಅಥವಾ ಖಾಯಂ ಆಗಿ ಮುಚ್ಚಬಹುದು.

**XX XX XX**

**29. ಗೃಹ ನಿರ್ಮಾಣ ಯೋಜನೆಯ ಅಥವಾ ಭೂ ಅಭಿವೃದ್ಧಿ ಯೋಜನೆಯ ಮೇರೆಗೆ ಮಂಡಲಿಯು ವಿನ್ಯಾಸಗೊಳಿಸಿದ ಅಥವಾ ವ್ಯತ್ಯಾಸಗೊಳಿಸಿದ ಬೀದಿಗಳು ಮತ್ತು ಒದಗಿಸಿದ ಬಹಿರಂಗ ಸ್ಥಳವು ಪೌರ ನಿಗಮದಲ್ಲಿ, ಪುರಸಭಾ ಪರಿಷತ್ತಿನಲ್ಲಿ, ಪುರಸಭಾ ಸಮಿತಿಯಲ್ಲಿ ಅಥವಾ ಇತರ ಪುರಸಭಾ ನಿಕಾಯದಲ್ಲಿ, ಪಟ್ಟಣ ಮಂಡಲಿಯಲ್ಲಿ, ನೈರ್ಮಲ್ಯ ಮಂಡಲಿಯಲ್ಲಿ ಅಥವಾ ಮಂಡಲ ಪಂಚಾಯತಿ ಯಲ್ಲಿ ನಿಹಿತವಾಗುವುದು.–**

**XX XX XX**

**32ಎ. ಮಂಡಲಿಯು ಮತ್ತು ಗೃಹನಿರ್ಮಾಣ ಆಯುಕ್ತರು 1964ರ ಕರ್ನಾಟಕ ಅಧಿನಿಯಮ ಸಂಖ್ಯೆ 22, 1977ರ ಅಧಿನಿಯಮ ಸಂಖ್ಯೆ 14ರ ಮತ್ತು 1985ರ ಅಧಿನಿಯಮ ಸಂಖ್ಯೆ 20ರ ಮೇರೆಗಿನ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸುವುದು.–** (1) ಈ ಅಧಿನಿಯಮವು ಅನ್ವಯವಾಗುವ ಯಾವುದೇ ಪ್ರದೇಶದಲ್ಲಿ ಅಥವಾ ಅದರ ಯಾವುದೇ ಭಾಗದಲ್ಲಿ ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಮತ್ತು ಅವಧಿಗೆ ಹಾಗೂ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಯಾವುವೇ ನಿರ್ಬಂಧಗಳಿಗೆ ಹಾಗೂ ಮಾರ್ಪಾಟುಗಳಿಗೆ ಒಳಪಟ್ಟು,–

(i) 1964ರ ಕರ್ನಾಟಕ ಪುರಸಭೆಗಳ ಅಧಿನಿಯಮದ, 1976ರ ಕರ್ನಾಟಕ ಪೌರ ನಿಗಮಗಳ ಅಧಿನಿಯಮದ, 1983ರ ಕರ್ನಾಟಕ ಜಿಲ್ಲಾ ಪರಿಷತ್ತುಗಳು, ತಾಲ್ಲೂಕು ಪಂಚಾಯಿತಿ ಸಮಿತಿಗಳು, ಮಂಡಲ ಪಂಚಾಯಿತಿಗಳು ಮತ್ತು

ನ್ಯಾಯ ಪಂಚಾಯಿತಿಗಳ ಅಧಿನಿಯಮದ ಮೇರೆಗೆ ನಿಗಮವು, ಮುನಿಸಿಪಲ್ ಕೌನ್ಸಿಲ್ ಅಥವಾ ಮಂಡಲ ಪಂಚಾಯತಿಯು ಅಥವಾ ಅವುಗಳ ಸ್ಥಾಯೀ ಸಮಿತಿಗಳು ಹೊಂದಿರುವಂಥ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ಮಂಡಲಿಯು ಚಲಾಯಿಸತಕ್ಕದ್ದೆಂದು ಮತ್ತು ನಿರ್ವಹಿಸತಕ್ಕದ್ದೆಂದು; ಮತ್ತು

(ii) ನಿಗಮದ ಕಮೀಷನರ್, ಪುರಸಭಾ ಕಮೀಷನರ್, ಮುನಿಸಿಪಲ್ ಕೌನ್ಸಿಲಿನ ಮುಖ್ಯಾಧಿಕಾರಿ ಅಥವಾ ಸಂದರ್ಭಾನುಸಾರ ಮಂಡಲ ಪಂಚಾಯತಿಯ ಕಾರ್ಯದರ್ಶಿಯು ಹೊಂದಿರುವ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ಗೃಹನಿರ್ಮಾಣ ಕಮೀಷನರ್ ಚಲಾಯಿಸತಕ್ಕದ್ದೆಂದು ಮತ್ತು ನಿರ್ವಹಿಸತಕ್ಕದ್ದೆಂದು - ಘೋಷಿಸಬಹುದು:

ಪರಂತು, ಅಂತಹ ಪ್ರದೇಶವು ಅಥವಾ ಅದರ ಯಾವುದೇ ಭಾಗವು ನಗರದ ಅಥವಾ ನಗರ ಅಥವಾ ಪಟ್ಟಣ ಪುರಸಭೆಯ ಅಥವಾ ಮಂಡಲ ಪಂಚಾಯತಿಯ ಪರಿಮಿತಿಗಳೊಳಗೆ ಇದ್ದರೆ, ಅಂತಹ ಘೋಷಣೆಯನ್ನು ಮಾಡುವುದಕ್ಕೆ ಮುಂಚೆ ಸಂಬಂಧಪಟ್ಟ ನಿಗಮದೊಂದಿಗೆ, ಮುನಿಸಿಪಲ್ ಕೌನ್ಸಿಲ್‌ನೊಂದಿಗೆ ಅಥವಾ ಮಂಡಲ ಪಂಚಾಯತಿಯೊಂದಿಗೆ ಸಮಾಲೋಚಿಸತಕ್ಕದ್ದು.

**XX XX XX**

**33. ಒಪ್ಪಂದದ ಮೂಲಕ ಖರೀದಿಸಲು ಅಥವಾ ಗುತ್ತಿಗೆಗೆ ತೆಗೆದುಕೊಳ್ಳಲು ಅಧಿಕಾರ.–** (1) ಮಂಡಲಿಯು, ಯಾವ ವ್ಯಕ್ತಿಯಿಂದ ಗೃಹ ನಿರ್ಮಾಣ ಯೋಜನೆಯ ಅಥವಾ ಭೂ ಅಭಿವೃದ್ಧಿ ಯೋಜನೆ ಯ ಉದ್ದೇಶಕ್ಕಾಗಿ ಬೇಕಾಗುವ ಯಾವುದೇ ಜಮೀನನ್ನು ಅಥವಾ ಆ ಜಮೀನಿನಲ್ಲಿನ ಯಾವುದೇ ಹಿತಾಸಕ್ತಿಯನ್ನು ಖರೀದಿಸುವ, ಗುತ್ತಿಗೆಗೆ ತೆಗೆದುಕೊಳ್ಳುವ ಅಥವಾ ವಿನಿಮಯ ಮಾಡಿಕೊಳ್ಳುವ ಮೂಲಕ ಅವನಿಂದ ಆರ್ಜಿಸಿಕೊಳ್ಳುವ ಬಗ್ಗೆ ಅಥವಾ ಆ ಜಮೀನನ್ನು ಯಾವುದೇ ರೀತಿಯಲ್ಲಿ ಕಳೆದುಕೊಂಡ ಅಥವಾ ಅದನ್ನು ಹಸ್ತಕ್ಷೇಪಕ್ಕೆ ಗುರಿಪಡಿಸಿದ ಸಂಬಂಧದಲ್ಲಿ ಒಡೆಯರಿಗೆ ಯಾವುದೇ ಅಂಥ ಹಕ್ಕಿನ ಬಗ್ಗೆ ಪರಿಹಾರವನ್ನು ಕೊಡುವುದಕ್ಕಾಗಿ ಆ ಯಾವನೇ ವ್ಯಕ್ತಿಯೊಂದಿಗೆ ಒಪ್ಪಂದ ಮಾಡಿಕೊಳ್ಳಬಹುದು:

ಪರಂತು, ಹತ್ತು ಲಕ್ಷ ರೂಪಾಯಿಗಳಿಗಿಂತ ಹೆಚ್ಚಿನ ಮೌಲ್ಯದ ಜಮೀನನ್ನು ಅಥವಾ ಐದು ವರ್ಷಗಳಿಗಿಂತ ಹೆಚ್ಚಿನ ಗುತ್ತಿಗೆಯನ್ನು ಒಳಗೊಂಡ ಖರೀದಿ ಅಥವಾ ವಿನಿಮಯದ ಸಂದರ್ಭದಲ್ಲಿ ರಾಜ್ಯ ಸರ್ಕಾರದಿಂದ ಮೊದಲೇ ಅನುಮೋದನೆಯನ್ನು ಪಡೆದುಕೊಳ್ಳತಕ್ಕದ್ದು.

(2) ಈ ಅಧಿನಿಯಮದ ಮೂಲಕ ಮಾರ್ಪಾಟು ಮಾಡಿದ ಭೂ ಆರ್ಜನಾ ಅಧಿನಿಯಮ, 1894ರಲ್ಲಿ ಉಪಬಂಧಿಸಿದ ರೀತಿಯಲ್ಲಿ ಗೃಹನಿರ್ಮಾಣ ಯೋಜನೆಯನ್ನು ಅಥವಾ ಭೂ ಅಭಿವೃದ್ಧಿ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕಾಗಿ ಅಗತ್ಯವಾದ ಯಾವುದೇ ಜಮೀನನ್ನು ಅಥವಾ ಅದರಲ್ಲಿನ ಯಾವುದೇ ಹಿತಾಸಕ್ತಿಯನ್ನು ಕಡ್ಡಾಯವಾಗಿ ಆರ್ಜಿಸಲು ಸಹ ಮಂಡಲಿಯು ಕ್ರಮ ಕೈಗೊಳ್ಳಬಹುದು ಮತ್ತು ಈ ಅಧಿನಿಯಮದ ಉದ್ದೇಶಕ್ಕಾಗಿ ಯಾವುದೇ ಜಮೀನಿನ ಅಥವಾ ಅದರಲ್ಲಿನ ಯಾವುದೇ ಹಿತಾಸಕ್ತಿಯ ಆರ್ಜನೆಯು ಭೂ ಆರ್ಜನಾ ಅಧಿನಿಯಮ, 1894ರ ಅರ್ಥದಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಮಾಡಿದ ಆರ್ಜನೆ ಎಂಬುದಾಗಿ ಭಾವಿಸತಕ್ಕದ್ದು.

**XX XX XX**

**52. ತುರ್ತು ಸಂದರ್ಭದಲ್ಲಿ ವೆಚ್ಚ, ಇತ್ಯಾದಿ.–** (1) ಅತಿ ತುರ್ತು ಸಂದರ್ಭಗಳು ಉದ್ಭವಿಸಿವೆ ಎಂದು ಮಂಡಲಿಯು ಅಭಿಪ್ರಾಯಪಟ್ಟಲ್ಲಿ, ಯಾವುದೇ ವರ್ಷದಲ್ಲಿ ಈ ಅಧಿನಿಯಮದ ಉದ್ದೇಶಗಳಿಗಾಗಿ, ಒಂದು ಲಕ್ಷ ರೂಪಾಯಿಗಳನ್ನು ಮೀರದ ವೆಚ್ಚವನ್ನು ರಾಜ್ಯ ಸರ್ಕಾರವು ಮಂಜೂರು ಮಾಡಿದ ಅದರ ವಾರ್ಷಿಕ ಕಾರ್ಯಕ್ರಮದಲ್ಲಿ ಅಥವಾ ಪೂರಕ ಕಾರ್ಯಕ್ರಮದಲ್ಲಿ ಅಥವಾ 23ನೇ ಪ್ರಕರಣದ ಮೇರೆಗೆ ಮಾಡಿದ ಆ ಕಾರ್ಯಕ್ರಮದ ಮಾರ್ಪಾಟಿನಲ್ಲಿ ಸೇರಿಸಿರದಿದ್ದರೂ, ಮಂಡಲಿಯು ಆ ವೆಚ್ಚವನ್ನು ವಹಿಸುವುದು ಕಾನೂನು ಸಮ್ಮತವಾಗಿರತಕ್ಕದ್ದು.

**XX XX XX**

(3) ಮಂಡಲಿಯು, ರಾಜ್ಯ ಸರ್ಕಾರವು ಮಂಜೂರು ಮಾಡಿದ ಬಜೆಟ್‌ನೊಳಗೆ ಪ್ರಧಾನ ಲೆಕ್ಕ ಶೀರ್ಷಿಕೆಯಡಿಯಲ್ಲಿನ ಒಂದು ಉಪ ಶೀರ್ಷಿಕೆಯಿಂದ ಇನ್ನೊಂದು ಉಪ ಶೀರ್ಷಿಕೆಗೆ ಮತ್ತು ಸಣ್ಣ ಶೀರ್ಷಿಕೆಯಿಂದ ಇನ್ನೊಂದು ಸಣ್ಣ ಶೀರ್ಷಿಕೆಗೆ ಒಂದು ಲಕ್ಷ ರೂಪಾಯಿಗಳನ್ನು ಮೀರದ ವಿನಿಯೋಗಗಳನ್ನು ಅನುಮೋದಿಸಬಹುದು ಮತ್ತು ಅಂಥ ಪುನರ್ ವಿನಿಯೋಗಗಳ ಒಂದು ತಃಖ್ತೆಯನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸಬಹುದು.

**XX XX XX**

**64. ಮಾನವ ವಾಸಕ್ಕೆ ಯೋಗ್ಯವಲ್ಲದ ಮನೆಗಳಿಗಾಗಿ ಪರಿಹಾರ.–** 63ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ, ಯಾವುದೇ ಜಮೀನನ್ನು ಮಂಡಲಿಯು ಸ್ವಾಧೀನಪಡಿಸಿಕೊಂಡಿದ್ದರೆ ಅದಕ್ಕೆ ಸಂಬಂಧಪಟ್ಟಂತೆ ಸಂದಾಯ ಮಾಡಬೇಕಾದ ಪರಿಹಾರವನ್ನು ಮಾನವ ವಾಸಕ್ಕೆ ಯೋಗ್ಯವಲ್ಲದ ಮತ್ತು ವೆಚ್ಚ ಮಾಡಿದರೂ ಹಾಗೆ ಯೋಗ್ಯವಾಗಿ ಪರಿವರ್ತಿಸಲು ಸಾಧ್ಯವಿಲ್ಲದಂಥ ಮನೆಯ ಬಗ್ಗೆ ಸಂದಾಯ ಮಾಡಬೇಕಾದ ಪರಿಹಾರವು ಕಟ್ಟಡವನ್ನು ಕೆಡವಿಹಾಕಿದ ನಿವೇಶನವಾಗಿದ್ದರೆ ಹೇಗೋ ಹಾಗೆ ಆ ಜಮೀನಿನ ಮೌಲ್ಯವಾಗಿರತಕ್ಕದು ಎಂಬ ಷರತ್ತಿಗೆ ಒಳಪಟ್ಟು, ಭೂ ಆರ್ಜನೆ ಅಧಿನಿಯಮ, 1894ಕ್ಕೆ ಅನುಸಾರವಾಗಿ ನಿರ್ಧರಿಸತಕ್ಕದ್ದು.

**XX XX XX**

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TENTH SESSION**

## THE KARNATAKA HOUSING BOARD (AMENDMENT) BILL, 2016
## (L.A. Bill No. 24 of 2016)

A Bill further to amend the Karnataka Housing Board Act, 1962.

Whereas it is expedient further to amend the Karnataka Housing Board Act, 1962 (Karnataka Act 10 of 1963) for the purposes hereinafter appearing;

Be it enacted by the Karnataka State Legislature in the sixty-seventh year of the Republic of India as follows:-

**1. Short title and commencement.-** (1) This Act may be called the Karnataka Housing Board (Amendment) Act, 2016.

(2) It shall come into force at once.

**2. Amendment of long title and preamble.-** In the Karnataka Housing Board Act, 1962 (Karnataka Act 10 of 1963), (hereinafter referred to as the Principal Act), for the long title and first paragraph of the preamble, the following shall be substituted, namely:-

"An Act to provide for quality and affordable housing accommodation to all sections of the society.

Whereas it is expedient to provide for quality and affordable housing accommodation to all sections of the society with special emphasis to economically weaker sections and to adopt sustainable, equitable and eco-friendly design and construction techniques and with that object in view it is necessary to establish a Board for the State of Karnataka and to make certain other provisions;

**3. Amendment of section 2.-** In section 2 of the principal Act,-

(i) after clause (h), the following shall be inserted, namely:-

"(h-1) "Joint Venture Projects" means, projects taken up by Local bodies or Private parties and the Board jointly, subject to such terms and conditions as may be prescribed."

(ii) after clause (n), the following shall be inserted, namely:-

(n-1) "Public Private Partnership projects" means a project on a specific term of contract between a private party and the Board for providing a public asset or service subject to such norms as may be prescribed."

**4. Amendment of section 3.-** In section 3 of the principal Act,-

(i) in sub-section (2),-

(a) for clause (b), the following shall be substituted, namely:-

"(b) the Additional Chief Secretary or the Principal Secretary or the Secretary to Government as the case may be Housing Department, Government of Karnataka;"

(b) for clause (e), the following shall be substituted, namely:-

"(e) the Director of Town and Country Planning, Government of Karnataka,"

(c) for clause (f), the following shall be substituted, namely:-

"(f) the Additional Chief Secretary or the Principal Secretary or the Secretary to Government as the case may be, Energy Department, Government of Karnataka;"

(d) after clause (h), the following shall be inserted, namely:-

"(h-1) the Additional Chief Secretary or the Principal Secretary or the Secretary to Government as the case may be Urban Development Department, Government of Karnataka;

(h-2) the Chief engineer of the Board;

(h-3) the Additional Director of Town and Country Planning of the Board;

(h-4) the Secretary of the Board who shall be the member Secretary;".

(e) for clause (i), the following shall be substituted, namely:-

"(i) three non-official members appointed by the State Government of which one shall be woman".

(ii) in sub-section (4), for the words and figures "the land acquisition Act, 1894", the words, figures and brackets "the Right to Fair Compensation and Transparency in Land Acquisition, Rehabilitation and Resettlement Act, 2013 (Central Act 30 of 2013)" shall be substituted.

**5. Amendment of section 6.-** In section 6 of the principal Act, for the words, "other member" wherever they occur, the words "other non-official member" shall be substituted.

**6. Amendment of section 7.-** In section 7 of the principal Act,-

(i) for the words, "other member" the words "other non- official member" shall be substituted; and

(ii) in clause (c), for the words, "a member" the words "non- official member" shall be substituted.

**7. Amendment of section 8.-** In section 8 of the principal Act,-

(i) in sub-section (1), for the words, "a member" the words "non-official member" shall be substituted; and

(ii) in sub-section (2), for the word, "members" the words "non-official members" shall be substituted.

**8. Amendment of section 10.**- In section 10 of the principal Act,-

(i) in the heading, after the words "Chief Engineer", the words "the Additional Director of Town and Country Planning" shall be inserted;

(ii) in sub-section (2), after the words "the Chief Engineer", the words "the Additional Director of Town and Country Planning" shall be inserted;

(iii) in sub-section (7), after the words "the Chief Engineer" the comma and words ",the Additional Director of Town and Country Planning" shall be inserted.

**9. Amendment of section 15.-** In section 15 of the principal Act, in sub-section (1),-

(i) in clause (a), for the words "rupees fifty lakhs", the words "rupees two hundred and fifty lakhs" shall be substituted;

(ii) in clause (b), for the words "rupees ten lakhs", occurring in two places the words "rupees fifty lakhs" shall be substituted;

(iii) after clause (b), the following shall be inserted, namely:-

"(c) No joint venture or public private partnership arrangement involving an estimated cost of rupees two hundred and fifty lakhs and more shall be made without the previous sanction of the State Government, subject to such terms and conditions as may be prescribed of such joint venture or public private partnership as the case may be."

**10. Substitution of section 17.-** For section 17 of the principal Act, the following shall be substituted, namely:-

**"17. Duty of the Board to undertake housing schemes, land development schemes, infrastructure development, building construction schemes, schemes under joint venture or public private partnership.-** Subject to the provisions of this Act and the rules made in this behalf and control of the State Government, the Board may incur expenditure and undertake works in any area for the framing and execution of such housing schemes, land development schemes, infrastructure development, construction and disposal of the commercial premises and building construction schemes as it may consider necessary or as may be entrusted to it by the State Government or Government undertakings or under joint venture or public private partnership arrangements subject to such conditions as may be prescribed."

**11. Amendment of section 19.-** In section 19 of the Principal Act, in sub-section (1), clause (iii) shall be omitted.

**12. Substitution of section 20.-** For section 20 of the Principal Act, the following shall be substituted, namely:-

"**20. Sanction to programme and budget.**- The State Government may sanction the programme and the budget forwarded to it with such modifications as it deems fit."

**13. Amendment of section 25.-** In the principal Act,-

(i) in the heading to section 25, for the words "or a mandal panchayat", the words "or a Grama panchayat" shall be substituted;

(ii) in section 25, for the words "town board, sanitary board or the mandal panchayath" wherever they occur the words, " town panchayat or the Grama panchayat" shall respectively be substituted;

(iii) in sub-section (1), for clause (c), the following shall be substituted, namely:-

"(c) is situated in any area included within the jurisdiction of a town panchayat or grama panchayat constituted under the Karnataka Municipalities Act, 1964 or the Gram Swaraj and Panchayat Raj Act, 1993 and is vested in such town panchayat or Grama panchayat"

**14. Amendment of section 26**.- In section 26 of the principal Act, for the words "town board, sanitary board or the mandal panchayat" wherever they occurs, the words, "town panchayat or the Grama panchayat" shall be substituted.

**15. Amendment of section 27.-** In section 27 of the principal Act, in the heading and in sub-section (1), after the words, "public street", the words "or divert nala" shall be inserted.

**16. Amendment of section 29.-** In section 29 of the principal Act, in the heading and in the section, for the words, "town board, sanitary board or mandal panchayath" wherever they occur, the words " town panchayat or Grama panchayat" shall respectively be substituted.

**17. Amendment of section 32A**.- In section 32A of the principal Act,-

(i) in the heading, for the figures and the word "20 of 1985", the figures and the word "14 of 1993" shall be substituted;

(ii) for sub-section (1), the following shall be substituted, namely:-

"(1) After the completion of any housing scheme or land development scheme till the layout is handed over to the concerned Corporation, City Municipal Council, Town Municipal Council, Town Panchayat or a Grama panchayat, as the case may be, under section 29,-

(a) the powers and functions of the Municipal Corporation, City Municipal Council, Town Municipal Council, Town Panchayat or a Grama panchayat or standing committee by whatever name called, under the Karnataka Municipalities Act, 1964 (Karnataka Act No. 22 of 1964) or the Karnataka Municipal Corporations Act, 1976 (Karnataka Act 14 of 1977) or the words the Karnataka Gram Swaraj and Panchayat Raj Act, 1993 (Karnataka Act 14 of 1993) shall be exercised by the Board; and

(b) the powers and functions of the Commissioner of Corporation, Chief Officer of the Municipal Council, town panchayat or Panchayat Development Officer or the Secretary of the Grama Panchayat as the case may be shall be, exercised and discharged by the Housing Commissioner.

(c) The Board shall collect the maintenance and other charges from the allottees or purchasers till handing over of layout to the local authority after the completion of housing scheme or land development scheme. The maintenance and other charges shall be such as may be decided by the Board."

**18. Substitution of section 33.-** For section 33 of the principal Act, the following shall be substituted, namely:-

**"33. Power to purchase land, lease, exchange or procuring by agreement.-** (1) The Board may enter into an agreement for purchase of the Land from any person or take on lease or exchange any land required for the purposes of a housing scheme or land development scheme or any interest in such land or for compensating the owners of any such right in respect of any deprivation or interference therewith subject to such terms and conditions as may be prescribed.

Provided that Subject to such rules, as may be prescribed, the previous approval of the State Government is necessary in case of purchase or exchange or sharing basis of land in lieu of compensation in respect of project involving land worth more than rupees two hundred and fifty lakhs or lease for more than ten years.

(2) The Board may take steps for compulsory acquisition of any land or any interest therein through the State Government required for the execution of a housing scheme or land development scheme in accordance with the procedure provided in the Right to fair compensation and transparency in land acquisition, rehabilitation and resettlement Act, 2013 (Central Act 30 of 2013).

(3) The Board may procure land by purchase or exchange or sharing of land in lieu of compensation subject to such rules as may be prescribed provide link roads, for water resources, sewage treatment plants, providing infrastructure like roads, power, water civic amenities in the execution of a housing scheme or land development scheme, construction projects and urban infrastructure purposes even when such procurement is on behalf of Government agencies."

**19. Amendment of section 52.-** In section 52 of the principal Act, in sub-section (1) and (3), for the words "one lakhs" the words "fifty lakhs" shall respectively be substituted.

**20. Amendment of section 64.-** In section 64 of the principal Act, for the words and figures " the Land Acquisition Act, 1894" the words, figures and brackets " the Right to fair compensation and transparency in land acquisition, rehabilitation and resettlement Act, 2013 (Central Act 30 of 2013)" shall be substituted.

**21. Insertion of new section 76A.-** After section 76 of the principal Act, the following shall be inserted, namely:-

**"76A. Power of the Board to make bulk allotment.-** Not withstanding anything contained in this Act or land development scheme sanctioned under this Act, the Board may, subject to such restrictions, conditions and after limitation as may be prescribed, make bulk allotment with prior approval of the Government by sale, lease or otherwise of sites developed, houses or flats constructed by it or belonging to it or vested in it or acquired by it for the purpose of any development scheme,-

(i) to the State Government; or

(ii) to the Central Government; or

(iii) to any corporation, body or organization owned or controlled by the central Government or State Government."

## STATEMENT OF OBJECTS AND REASONS

It is considered necessary to amend Karnataka Housing Board Act, 1962(Karnataka Act 10 of 1963)to,-

1. reconstitute the Board;
2. empowers the Board to discharge Local Authority functions till handing over of the layout developed by it and to collect maintenance and other charges in such lay-out;
3. substitute the Right to Fair Compensation and Transparency in Land Acquisition, Rehabilitation and Resettlement Act, 2013 instead of Land Acquisition Act, 1894;
4. substitute the words "Town Board, Sanitary Board and Mandal Panchayat" with the words "Town Panchayats and Gram Panchayat;"
5. empower the Board to take up public private partnership Housing Schemes;
6. enhance the powers of the Board to take up projects from fifty lakhs to two hundred and fifty lakhs;
7. empower the Board for making bulk allotment of houses, sites or flats developed by it to the State Government, Central Government, any Corporation, Body, organisation owned or controlled by the State Government or Central Government; and
8. Certain consequential or incidental amendments are also made.

Hence the Bill.

## FINANCIAL MEMORANDUM

There is no extra expenditure involved in the proposed legislative measure.

## MEMORANDUM REGARDING DELEGATED LEGISLATION

| | |
|---|---|
| Clause-3 | (1) Clause (h-1) proposed to be inserted in section 2, empowers the State Government to prescribe by rules the terms and conditions for joint venture projects<br>(2) Clause (n-1) proposed to be inserted in section 2, empowers the State Government to prescribe by rules the norms for contract between private party and the Board for Public Private Partnership projects. |
| Clause-9 | Clause (C) propose to be inserted in sub-section (1) of section 15, empowers the State Government to prescribe by rules the terms and conditions for estimated cost of joint venture or public private partnership arrangements. |
| Clause-10 | Section 17 proposed to be substituted empowers the State Government to prescribe by rules the conditions joint venture or pubic private partnership arrangements to be taken up by the Board. |
| Clause-18 | Section 33 proposed to be substituted,-<br>(a) sub-section (1) empowers the State Government to prescribe by rules,-<br>(i) The terms and conditions subject to which the Board may purchase land, lease, exchange or procure by agreement for housing scheme or land development scheme or for compensating the owners any such right in respect of any deprivation.<br>(ii) In the proviso, the manner for previous approval of the State Government in case of purchase or exchange or sharing basis of land in lieu of compensation in respect of project involving land worth more than rupees two hundred and fifty lakhs or lease for more than ten years.<br>(b) Sub-section (3) empowers the State Government to make rules regarding the manner of sharing of land in lieu of compensation for procured land or by purchase or exchange or sharing of land to provide link roads, for water resources, sewage treatment plants and other schemes. |
| Clause-21 | Section 76A proposed to be inserted empowers the State Government to make rules regarding restrictions, conditions and limitation subject to which bulk allotment or to be made by the Board with prior approval of the Government. |

The Proposed delegation of legislative power is normal in character.

**Siddaramaiah**
Chief Minister

**S.Murthy**
Secretary (I/C)
Karnataka Legislative Assembly

| | |
|---|---|
| **Number of Institutions** | **: 23** |
| **Number of Properties** | **: 47** |
| **Total Extent** | **: 36A – 35G** |
| **Sq.ft** | **: 83551.10 Sq.ft** |

By order and in the name of the Governor of Karnataka

**AKRAM BHASHA**
Under Secretary to Government(I/c)
Minority Welfare Haj & Wakf Department.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) (500 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–*IVA* | ಬೆಂಗಳೂರು, ಶುಕ್ರವಾರ, ಜುಲೈ ೧೫, ೨೦೧೬ (ಆಷಾಢ ೨೪, ಶಕ ವರ್ಷ ೧೯೩೮) | ನಂ. ೯೨೬ |
|---|---|---|
| *Part–IVA* | *Bengaluru, Friday, July 15, 2016 (Ashada 24 Shaka Varsha 1938)* | *No. 926* |


**KARNATAKA LEGISLATIVE ASSEMBLY SECRETARIAT**
**NOTIFICATION**
**No. KLA/LGA/18/Bill/2016, Bengaluru, Dated: 14.07.2016**

The following Bill was introduced in Legislative Assembly on 14.07.2016

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**(ಹತ್ತನೇ ಅಧಿವೇಶನ)**
**ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ (ತಿದ್ದುಪಡಿ) ವಿಧೇಯಕ, 2016**
**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ–18)**

ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 36) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ, ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 72ಎ ಪ್ರಕರಣದ ತಿದ್ದುಪಡಿ.–** ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 36) 72ಎ ಪ್ರಕರಣದಲ್ಲಿ, "2400 ಚದರ ಅಡಿಗಳಿಗೆ" ಎಂಬ ಅಂಕಿಗಳು ಮತ್ತು ಪದಗಳಿಗೆ "216 ಚದರ ಮೀಟರುಗಳಿಗೆ" ಎಂಬ ಅಂಕಿಗಳು ಮತ್ತು ಪದಗಳನ್ನು ಹಾಗೂ "1200 ಚದರ ಅಡಿಗಳಿಗೆ" ಎಂಬ ಅಂಕಿಗಳು ಮತ್ತು ಪದಗಳಿಗೆ "108 ಚದರ ಮೀಟರುಗಳಿಗೆ" ಎಂಬ ಅಂಕಿಗಳು ಮತ್ತು ಪದಗಳನ್ನು ಅನುಕ್ರಮವಾಗಿ ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ವಸತಿ ಮಂಡಳಿ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಗಳು ತಮ್ಮ ಯಶಸ್ವಿ ಅರ್ಜಿದಾರರಿಗೆ ಚದರ ಮೀಟರುಗಳ ರೂಪದಲ್ಲಿ 216 ಚದರ ಮೀಟರುಗಳ ಮತ್ತು 108 ಚದರ ಮೀಟರುಗಳ ಅಳತೆಯುಳ್ಳ ನಿವೇಶನಗಳನ್ನು ಹಂಚುತ್ತಿದ್ದು ಅವು ಅನುಕ್ರಮವಾಗಿ 2400 ಚದರ ಅಡಿಗಳು ಮತ್ತು 1200 ಚದರ ಅಡಿಗಳಿಗೆ ಅಂಚುಗಳಲ್ಲಿ

ಕಡಿಮೆಯಿರುತ್ತವೆ (marginally less). ಈ ಹಿನ್ನಲೆಯಲ್ಲಿ, 216 ಚದರ ಮೀಟರುಗಳಿಗೆ ಕಡಿಮೆಯಿಲ್ಲದ ನಿವೇಶನ ಪ್ರದೇಶದಲ್ಲಿ ಮತ್ತು 108 ಚದರ ಮೀಟರುಗಳಿಗಿಂತ ಕಡಿಮೆಯಲ್ಲದ ನಿವೇಶನ ಪ್ರದೇಶದ ಮೇಲೆ ಕಟ್ಟಡವನ್ನು ನಿರ್ಮಿಸುವ ಉದ್ದೇಶವಿರುವ ಪ್ರತಿಯೊಬ್ಬ ಮಾಲೀಕನು ಮಳೆ ನೀರು ಕೊಯ್ಲು ಕಲ್ಪಿಸುವುದನ್ನು ಕಡ್ಡಾಯಗೊಳಿಸುವುದಕ್ಕೆ ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಅಧಿನಿಯಮದ 72ಎ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಕೆ.ಜೆ. ಜಾರ್ಜ್**
ಬೆಂಗಳೂರು ಅಭಿವೃದ್ಧಿ ಹಾಗೂ ಪಟ್ಟಣ
ಮತ್ತು ಗ್ರಾಮಾಂತರ ಯೋಜನೆ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

**ಅನುಬಂಧ**
**ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಅಧಿನಿಯಮ, 1964ರ**
**(1964ರ ಕರ್ನಾಟಕ ಅಧಿನಿಯಮ 36) ಉದ್ಧೃತ ಭಾಗ**

Xx xx xx

**72ಎ. ಮಳೆ ನೀರು ಕೊಯ್ಲು ರಚನೆಯನ್ನು ಕಲ್ಪಿಸುವ ಹೊಣೆಗಾರಿಕೆ.–** 2400 ಚದರ ಅಡಿಗಳಿಗೆ ಕಡಿಮೆಯಿಲ್ಲದ ನಿವೇಶನ ಪ್ರದೇಶವನ್ನು ಹೊಂದಿರುವ ಕಟ್ಟಡದ ಪ್ರತಿಯೊಬ್ಬ ಮಾಲೀಕನು ಅಥವಾ ಅಧಿಭೋಗದಾರನು ಅಥವಾ 1200 ಚದರ ಅಡಿಗಳಿಗೆ ಕಡಿಮೆಯಿಲ್ಲದ ನಿವೇಶನ ಪ್ರದೇಶದಲ್ಲಿ ಕಟ್ಟಡವನ್ನು ನಿರ್ಮಿಸಬೇಕೆಂದು ಪ್ರಸ್ತಾವಿಸುವ ಪ್ರತಿಯೊಬ್ಬ ಮಾಲೀಕನು, ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ದಿನಾಂಕದೊಳಗೆ ಮತ್ತು ಮಂಡಳಿಯು ಹೊರಡಿಸುವ ವಿನಿಯಮಗಳು ಮತ್ತು ಮಾರ್ಗಸೂಚಿಗಳಲ್ಲಿ ಉಪಬಂಧ ಕಲ್ಪಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು ಬಳಕೆಗಾಗಿ ಅಥವಾ ಅಂತರ್ಜಲ ಮರುಭರ್ತಿ ಸಂಗ್ರಹಣೆಗಾಗಿ, ಮಳೆ ನೀರು ಕೊಯ್ಲಿನ ರಚನೆಯನ್ನು ಕಲ್ಪಿಸತಕ್ಕದ್ದು.

**ವಿವರಣೆ.–** ಈ ಅಧಿನಿಯಮದ ಉದ್ದೇಶಕ್ಕಾಗಿ,–

(ಎ) "ಮಳೆ ನೀರು ಕೊಯ್ಲು" ಎಂದರೆ ಬಳಕೆಗಾಗಿ ಅಥವಾ ಅಂತರ್ಜಲ ಮರುಭರ್ತಿಗಾಗಿ ಒಂದು ಕಟ್ಟಡದ ಮೇಲ್ಛಾವಣೆಯಿಂದ ಅಥವಾ ಖಾಲಿ ಭೂಮಿಯಿಂದ ಮಳೆ ನೀರಿನ ಸಂಗ್ರಹಣೆ ಮಾಡುವುದು ಮತ್ತು ದಾಸ್ತಾನು ಮಾಡುವುದು;

(ಬಿ) "ಮಳೆ ನೀರು ಮರುಭರ್ತಿ" ಎಂದರೆ ಕೊಯ್ಲು ಮಾಡಿದ ಮಳೆ ನೀರಿನ ಬಳಕೆಯಿಂದ, ತೆರೆದ ಬಾವಿ ಅಥವಾ ಸಂದರ್ಭಾನುಸಾರವಾಗಿ ಅಂತರ್ಜಲ ನೀರನ್ನು ಮರುಭರ್ತಿ ಮಾಡುವುದು."

Xx xx xx

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TENTH SESSION**
**THE BANGALORE WATER SUPPLY AND SEWERAGE (AMENDMENT) BILL, 2016**
**(L.A. Bill No. 18 of 2016)**

A Bill further to amend the Bangalore Water Supply and Sewerage Act, 1964.

Whereas, it is expedient further to amend the Bangalore Water Supply and Sewerage Act, 1964 (Karnataka Act 36 of 1964) for the purposes hereinafter appearing;

Be it enacted by the Karnataka State Legislature in the sixty-seventh year of the Republic of India as follows:-

**1. Short title and commencement.-** (1) This Act may be called the Bangalore Water Supply and Sewerage (Amendment) Act, 2016.

(2) It shall come into force at once.

**2. Amendment of section 72-A.-** In the Bangalore Water Supply and Sewerage Act, 1964 (Karnataka Act 36 of 1964) in Section 72-A, for the figures and words "2400 square feet" the figures and words "216 square meters" and for the figures and words "1200 square feet" the figures and words "108 square meters" shall be respectively, substituted.

**STATEMENT OF OBJECTS AND REASONS**

The proposed amendment is necessitated in view of the Karnataka Housing Board and Bangalore Development Authority have been allotting sites in terms of square meters measuring 216 square meters and 108 square meters in favour of their successful applicants which is marginally less than 2400 square feet and 1200 square feet respectively. In this background, it is considered necessary to amend section 72-A of the Bangalore Water Supply and Sewerage Act, 1964 to make compulsory of providing Rain Water Harvesting in sital area of not less than 216 square meters and every owner who propose to construct a building on a sital area of not less than 108 square meters.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**K.J.GEORGE**
Minister For Bangalore Development
and Town and Country Planning

**S.Murthy**
Secretary (I/C)
Karnataka Legislative Assembly

**ANNEXURE**

**EXTRACT FROM THE BANGALORE WATER SUPPLY AND SEWERAGE ACT, 1964 (KARNATAKA ACT 36 OF 1964)**

**XX XX XX**

**72A**. **Obligation to provide for rain water harvesting structure.-** Every owner or occupier of a building having sital area of not less than 2400 square feet or every owner who propose to construct a building on a sital area of not less than 1200 square feet shall provide rain water harvesting structure for storage for use or for ground water recharge within such date as may be notified by the state government in such manner and subject to such conditions as may be provided in the regulations and guidelines issued by the board.

**Explanation.-** for the purpose of this section,-

(a) "rain water harvesting" means collection and storage of rain water from roof top of a building or from a vacant land for use or for ground water recharge; and

(b) "ground water recharge" means recharging of open well or the under ground water as the case may be, by use of harvested rain water.

**xx xx xx**

**S. MURTHY**
Secretary(I/c)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ-*IVA* | ಬೆಂಗಳೂರು, ಶುಕ್ರವಾರ, ಜುಲೈ ೧೫, ೨೦೧೬ (ಆಷಾಢ ೨೪, ಶಕ ವರ್ಷ ೧೯೩೮) | ನಂ. ೯೨೭ |
|---|---|---|
| ***Part–IVA*** | ***Bengaluru, Friday, July 15, 2016 (Ashada 24 Shaka Varsha 1938)*** | ***No. 927*** |


**KARNATAKA LEGISLATIVE ASSEMBLY SECRETARIAT**
**NOTIFICATION**
**No. KLA/LGA/19/Bill/2016, Bengaluru, Dated: 14.07.2016**

The following Bill was introduced in Legislative Assembly on 14.07.2016

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಹತ್ತನೇ ಅಧಿವೇಶನ**
**ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ (ತಿದ್ದುಪಡಿ) ವಿಧೇಯಕ, 2016**
**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ–19)**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ನ್ನು (2000ರ ಕರ್ನಾಟಕ ಅಧಿನಿಯಮ 28) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 6ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ (2000ರ ಕರ್ನಾಟಕ ಅಧಿನಿಯಮ 28) 6ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಟೆಂಡರ್ ಆಹ್ವಾನಿಸುವ ಪ್ರಾಧಿಕಾರವು, ಅಧಿಸೂಚಿತ ಇಲಾಖೆಗಳಲ್ಲಿ ನಿಯಮಿಸಿದ ಪ್ರಕ್ರಿಯೆಗಳನ್ನು ಅನುಸರಿಸುವ ಮೂಲಕ ಕೈಗೊಳ್ಳಬೇಕಾದ ಅಗತ್ಯ ನೋಟೀಸುಗಳು, ಪತ್ರ ವ್ಯವಹಾರಗಳು ಮತ್ತು ಪ್ರಕಟಣೆಗಳನ್ನು ಹೊರಡಿಸುವಾಗ ನಿರ್ಮಾಣ ಕಾಮಗಾರಿಗಳ ಮೌಲ್ಯ 50 ಲಕ್ಷ ರೂಪಾಯಿಗಳಿಗೆ ಮೀರದ ಅಂಥ ಕಾಮಗಾರಿಗಳ ಶೇಕಡ 17.15ರಷ್ಟು ಸಂಖ್ಯೆಯನ್ನು ಮೀರದಂತೆ ಅನುಸೂಚಿತ ಜಾತಿಗಳ ವರ್ಗಕ್ಕೆ ಸೇರಿದವರಿಗೆ ಟೆಂಡರುದಾರರುಗಳ ಪೈಕಿ ಮಾತ್ರ ಟೆಂಡರನ್ನು ನೀಡತಕ್ಕದ್ದು ಮತ್ತು ಅಂಥ ಕಾಮಗಾರಿಗಳ ಶೇಕಡ 6.95ರಷ್ಟು ಸಂಖ್ಯೆಯನ್ನು ಮೀರದಂತೆ ಅನುಸೂಚಿತ ಪಂಗಡಗಳ ವರ್ಗಕ್ಕೆ ಸೇರಿದವರಿಗೆ ಟೆಂಡರುದಾರರುಗಳ ಪೈಕಿ ಮಾತ್ರ ಟೆಂಡರನ್ನು ನೀಡತಕ್ಕದ್ದು:

ಮತ್ತು ಪರಂತು, ಎರಡು ಬಾರಿಗಳಲ್ಲಿ ಆಹ್ವಾನಿಸಿರುವುದಕ್ಕೆ ಪ್ರತಿಕ್ರಿಯೆಯಾಗಿ ಅನುಸೂಚಿತ ಜಾತಿಗಳು ಅಥವಾ ಸಂದರ್ಭಾನುಸಾರವಾಗಿ ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಂದ ಟೆಂಡರ್ ಸ್ವೀಕರಿಸದಿದ್ದಲ್ಲಿ, ಅಂಥ ಕಾಮಗಾರಿಗಳನ್ನು ಇತರರಿಗೆ ಟೆಂಡರ್ ನೀಡಬಹುದು.

**ವಿವರಣೆ:–** ಈ ಪರಂತುಕದ ಉದ್ದೇಶಕ್ಕಾಗಿ,–

(1) "ಅನುಸೂಚಿತ ಜಾತಿಗಳು" ಭಾರತ ಸಂವಿಧಾನದ 341ನೇ ಅನುಚ್ಛೇದದ ಅಡಿಯಲ್ಲಿ ಮಾಡಿದ ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950ರ ಭಾಗ– VII ರಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕಾಲಕಾಲಕ್ಕೆ ತಿದ್ದುಪಡಿಯಾದಂತೆ ಅನುಸೂಚಿತ ಜಾತಿಗಳ ಉಲ್ಲೇಖ ಹೊಂದಿರತಕ್ಕದ್ದು.

(2) "ಅನುಸೂಚಿತ ಪಂಗಡಗಳು" ಭಾರತ ಸಂವಿಧಾನದ 342ನೇ ಅನುಚ್ಛೇದದ ಅಡಿಯಲ್ಲಿ ಮಾಡಿದ ಸಂವಿಧಾನ (ಅನುಸೂಚಿತ ಪಂಗಡಗಳು) ಆದೇಶ, 1950ರ ಭಾಗ– VI ರಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕಾಲಕಾಲಕ್ಕೆ ತಿದ್ದುಪಡಿಯಾದಂತೆ ಅನುಸೂಚಿತ ಪಂಗಡಗಳ ಉಲ್ಲೇಖ ಹೊಂದಿರತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳ ಸಮುದಾಯದಲ್ಲಿರುವ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಮತ್ತು 50 ಲಕ್ಷ ರೂಪಾಯಿಗಳವರೆಗಿನ ಒಟ್ಟು ಸರ್ಕಾರಿ ಕಾಮಗಾರಿ ಕೆಲಸಗಳ ಪೈಕಿ ಅಂಥ ಕಾಮಗಾರಿಗಳ ಸಂಖ್ಯೆಯ ಶೇಕಡ 17.15ರಷ್ಟನ್ನು ಮೀರದಂತೆ ಅನುಸೂಚಿತ ಜಾತಿಗಳ ವರ್ಗಕ್ಕೆ ಸೇರಿದವರಿಗೆ ಹಾಗೂ ಶೇಕಡ 6.95ರಷ್ಟನ್ನು ಮೀರದಂತೆ ಅನುಸೂಚಿತ ಪಂಗಡಗಳ ವರ್ಗಕ್ಕೆ ಸೇರಿದವರಿಗೆ ಪಾಲ್ಗೊಳ್ಳುವುದನ್ನು ಪ್ರೋತ್ಸಾಹಿಸುವುದಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ನ್ನು (2000ರ ಕರ್ನಾಟಕ ಅಧಿನಿಯಮ 28) ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತ ಜ್ಞಾಪನ ಪತ್ರ

| | |
|---|---|
| **ಖಂಡ 2** | ಈ ಖಂಡದ ಮೂಲಕ ಸೇರಿಸಲು ಉದ್ದೇಶಿಸಿರುವ 6ನೇ ಪ್ರಕರಣದ ಪರಂತುಕವು, ಟೆಂಡರ್ ಆಹ್ವಾನಿಸುವ ಪ್ರಾಧಿಕಾರವು, ಅಗತ್ಯ ನೋಟೀಸುಗಳು, ಪತ್ರ ವ್ಯವಹಾರಗಳು ಮತ್ತು ಪ್ರಕಟಣೆಗಳನ್ನು ಹೊರಡಿಸುವ ಸಂಬಂಧದಲ್ಲಿ ಅನುಸರಿಸುವ ಪ್ರಕ್ರಿಯೆಗಳ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಸಿದ್ದರಾಮಯ್ಯ**
ಮುಖ್ಯಮಂತ್ರಿಯವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ**

**(2000ರ ಕರ್ನಾಟಕ ಅಧಿನಿಯಮ ಸಂಖ್ಯೆ 29) ಉದ್ಧೃತ ಭಾಗ**

**Xx xx xx**

**6.ಸಂಗ್ರಹಣ ಸಂಸ್ಥೆಗಳು ಕಾರ್ಯವಿಧಾನವನ್ನು ಅನುಸರಿಸುವುದು.–** ಈ ಅಧಿನಿಯಮದಲ್ಲಿ ಅಥವಾ ಇದರಡಿ ರಚಿಸಿದ ನಿಯಮಗಳಲ್ಲಿ ನಿರೂಪಿಸಲಾದ ಕಾರ್ಯ ವಿಧಾನಕ್ಕನುಸಾರವಾಗಿಯಲ್ಲದೆ ಈ ಅಧಿನಿಯಮದ ಪ್ರಾರಂಭದ ತರುವಾಯ ಒಂದು ಸಂಗ್ರಹಣಾ ಸಂಸ್ಥೆಯು ಯಾವುದೇ ಟೆಂಡರನ್ನು ಆಹ್ವಾನಿಸತಕ್ಕದ್ದಲ್ಲ, ಪ್ರಕ್ರಿಯೆಗೊಳಪಡಿಸತಕ್ಕದ್ದಲ್ಲ ಅಥವಾ ಅಂಗೀಕರಿಸತಕ್ಕದ್ದಲ್ಲ.

**Xx xx xx**

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TENTH SESSION**

**THE KARNATAKA TRANSPARENCY IN PUBLIC PROCUREMENTS (AMENDMENT) BILL, 2016**
**(L.A. Bill No. 19 of 2016)**

A Bill further to amend the Karnataka Transparency in Public Procurements Act, 1999.

Whereas it is expedient further to amend the Karnataka Transparency in Public Procurements Act, 1999 (Karnataka Act 28 of 2000) for the purposes hereinafter appearing;

Be it enacted by the Karnataka State Legislature in the Sixty seventh year of the Republic of India as follows:-

**1. Short title and commencement.-** (1) This Act may be called the Karnataka Transparency in Public Procurements (Amendment) Act, 2016.

(2) It shall come into force at once.

**2. Amendment of section 6.-** In the Karnataka Transparency in Public Procurements Act, 1999 (Karnataka Act 28 of 2000), after Section 6, the following shall be inserted, namely:-

"Provided that, the tender inviting authority shall, in the notified Departments out of those construction works, value of which does not exceed Rs.50.00 Lakhs such number of works not exceeding 17.15 percent be tendered only among the tenderers belonging to the Scheduled Castes Category and such number of works not exceeding 6.95 percent be tendered only among tenderers belonging to the Scheduled Tribes Category, by taking out notices, communications and publications required to be taken following the prescribed procedures:

Provided further that, if no tender from persons belonging to the Scheduled Castes or Scheduled Tribes as the case may be, is received in response to the invitation in two attempts such works may be tendered among others.

**Explanation:-** For the purpose of this proviso,-

(1) "Scheduled Castes" shall have reference to the Scheduled Castes specified in part VII of the Constitution (Scheduled Castes) Order, 1950 made under Article 341 of the Constitution of India and as amended from time to time;

(2) "Scheduled Tribes" shall have reference to the Scheduled Tribes specified in part VI of the Constitution (Scheduled Tribes) Order, 1950 made under Article 342 of the Constitution of India and as amended from time to time;"

**STATEMENT OF OBJECTS AND REASONS**

It is considered necessary to amend the Karnataka Transparency in Public Procurements Act, 1999 (Karnataka Act 28 of 2000) to overcome the unemployment problem in the Scheduled Castes or Scheduled Tribes Community and to encourage their participation in such number of works not exceeding 17.15 percent for persons belonging to the Scheduled castes and not exceeding 6.95 percent for the persons belonging to the Scheduled tribes out of the total number of Government construction works upto Rupees 50.00 lakhs.

Hence the Bill.

**FINANCIAL MEMORANDUM**

There is no extra expenditure involved in the proposed legislative measure.

**MEMORANDUM REGARDING DELEGATED LEGISLATION**

| | |
|---|---|
| **Clause 2 :** | The proviso to section 6, proposed to be inserted by this clause empowers the State Government to make rules regarding the procedure of taking out notices, communications and publications required to be taken by the tender inviting authority. |

The proposed delegation of legislative power is normal in character.

**SIDDARAMAIAH**
CHIEF MINISTER

**S.Murthy**
Secretary (I/C)
Karnataka Legislative Assembly

**ANNEXURE**
**EXTRACT FROM THE KARNATAKA TRANSPARENCY IN PUBLIC PROCUREMENTS ACT, 1999 (KARNATAKA ACT 28 OF 2000)**

**XXX XXX XXX**

**6. Procurement Entities to follow Procedure.-** No tender shall be invited, processed or accepted by a Procurement Entity after the commencement of this Act except in accordance with the procedure laid down in this Act or the rules made thereunder.

**XXX XXX XXX**

**S. MURTHY**
Secretary(I/c)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಹಿ7) 50 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-*IVA* | ಬೆಂಗಳೂರು, ಶುಕ್ರವಾರ, ಜುಲೈ ೧೫, ೨೦೧೬ (ಆಷಾಢ ೨೪, ಶಕ ವರ್ಷ ೧೯೩೮) | ನಂ. ೯೨೮ |
|---|---|---|
| ***Part-IVA*** | ***Bengaluru, Friday, July 15, 2016 (Ashada 24 Shaka Varsha 1938)*** | ***No. 928*** |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/19/Bill/2016, Bengaluru, Dated: 14.07.2016**

The following Bill was introduced in Legislative Assembly on 14.07.2016

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಹತ್ತನೇ ಅಧಿವೇಶನ**

**ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕ, 2016**

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ-20)**

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಅಧಿನಿಯಮ, 1992ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಅಧಿನಿಯಮ, 1992ನ್ನು (1994ರ ಕರ್ನಾಟಕ ಅಧಿನಿಯಮ 46) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.-** ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಅಧಿನಿಯಮ, 1992ರ (1994ರ ಕರ್ನಾಟಕ ಅಧಿನಿಯಮ 46) 3ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ "ಮತ್ತು ಕರ್ನಾಟಕದ ಹೊರಗೆ ತಾನು ಉಚಿತವೆಂದು ಭಾವಿಸುವಂಥ ಸ್ಥಳಗಳಲ್ಲಿ ಸಹ ಕೇಂದ್ರಗಳನ್ನು ಪ್ರಾರಂಭಿಸಬಹುದು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ರಾಜ್ಯದ ಹೊರಗೆ ವಿಶ್ವವಿದ್ಯಾಲಯವು ಕೇಂದ್ರಗಳನ್ನು ತೆರೆಯುವುದು, ವಿಶ್ವವಿದ್ಯಾಲಯಗಳ ಅಧಿಕಾರವ್ಯಾಪ್ತಿಯ ಕುರಿತು ವಿಶ್ವವಿದ್ಯಾಲಯ ಅನುದಾನಗಳ ಆಯೋಗವು (ಯುಜಿಸಿ) ಹೊರಡಿಸಿರುವ ಸೂಚನೆಗಳಿಗೆ ಮತ್ತು ಸಂವಿಧಾನದ 245ನೇ ಅನುಚ್ಛೇದದ ಉಪಬಂಧಗಳಿಗೆ ವಿರುದ್ಧವಾಗಿರುವುದರಿಂದ ಹಾಗೂ ಸರ್ವೋಚ್ಚ ನ್ಯಾಯಾಲಯದಲ್ಲಿನ ಪ್ರೊ. ಯಶಪಾಲ್ ವಿರುದ್ಧ ಛತ್ತೀಸಗಢ ರಾಜ್ಯ ಈ ಪ್ರಕರಣದಲ್ಲಿ ಇದನ್ನೇ ಪುನರುಚ್ಚರಿಸಿರುವುದರಿಂದ

ಸದರಿ ಉಪಬಂಧಗಳನ್ನು ತೆಗೆದು ಹಾಕುವುದಕ್ಕೆ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಅಧಿನಿಯಮ, 1992ನ್ನು (1994ರ ಕರ್ನಾಟಕ ಅಧಿನಿಯಮ 46) ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಬಸವರಾಜ್ ರಾಯರೆಡ್ಡಿ**
ಉನ್ನತ ಶಿಕ್ಷಣ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

**ಅನುಬಂಧ**
**ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಅಧಿನಿಯಮ, 1992ರ**
**(1994ರ ಕರ್ನಾಟಕ ಅಧಿನಿಯಮ 46) ಉದ್ಧೃತ ಭಾಗ**

**XX XX XX**

**3. ವಿಶ್ವವಿದ್ಯಾನಿಲಯದ ಸ್ಥಾಪನೆ ಮತ್ತು ನಿಗಮನ.-** (1) "ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ" ಎಂಬ ಹೆಸರಿನಿಂದ ಕರೆಯಲಾಗುವ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸತಕ್ಕದ್ದು.

(2) ವಿಶ್ವವಿದ್ಯಾನಿಲಯದ ಕೇಂದ್ರ ಕಾರ್ಯಸ್ಥಾನವು ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಸ್ಥಳದಲ್ಲಿ ಇರತಕ್ಕದ್ದು ಮತ್ತು ಅದು ಕರ್ನಾಟಕದಲ್ಲಿ ಕಾಲೇಜುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸಬಹುದು, ನಡೆಸಬಹುದು ಅಥವಾ ಅವುಗಳಿಗೆ ಮಾನ್ಯತೆ ನೀಡಬಹುದು ಮತ್ತು ಕರ್ನಾಟಕದ ಹೊರಗೆ ತಾನು ಉಚಿತವೆಂದು ಭಾವಿಸುವಂಥ ಸ್ಥಳಗಳಲ್ಲಿ ಸಹ ಕೇಂದ್ರಗಳನ್ನು ಪ್ರಾರಂಭಿಸಬಹುದು.

**XX XX XX**

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TENTH SESSION**

# THE KARNATAKA STATE OPEN UNIVERSITY (AMENDMENT) BILL, 2016

**(L.A. Bill No. 20 of 2016)**

A Bill further to amend the Karnataka State Open University Act, 1992.

Whereas it is expedient further to amend the Karnataka State Open University Act, 1992 (Karnataka Act 46 of 1994) for the purposes hereinafter appearing;

Be it enacted by the Karnataka State Legislature in the Sixty seventh year of the Republic of India, as follows:-

**1. Short title and commencement.-** (1) This Act may be called the Karnataka State Open University (Amendment) Act, 2016.

(2) It shall come into force at once.

**2. Amendment of section 3.-** In section 3 of the Karnataka State Open University Act, 1992 (Karnataka Act 46 of 1994), in sub-section (2), the words "and may also open centres outside Karnataka at such places as it deems fit." shall be omitted.

**STATEMENT OF OBJECTS AND REASONS**

It is considered necessary to amend the Karnataka State Open Universities Act, 1992 (Karnataka Act 46 of 1994), to remove the provisions regarding opening of centers outside the state of Karnataka by the University as it contradicts the instructions issued by University Grants Commission (UGC) regarding jurisdiction of universities and the provisions of Article 245 of the Constitution, which is reiterated by the Supreme Court in Prof. Yashpal Vs. State of Chhattisgarh case.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**BASAVARAJ RAYAREDDI**
Minister for Higher Education

**S.Murthy**
Secretary (I/C)
Karnataka Legislative Assembly

**ANNEXURE**
**EXTRACT FROM THE KARNATAKA STATE OPEN UNIVERSITY ACT, 1992**
**(KARNATAKA ACT 46 OF 1994)**

**XX XX XX**

**3. Establishment and incorporation of the University.-** (1) There shall be established a University by the name of the Karnataka State Open University.

(2) The head-quarters of the University shall be at such place as may be specified by the Government by notification and it may establish, maintain or recognise colleges, Regional Centres and study centres at such places in Karnataka and may also open centres outside Karnataka at such places as it deems fit.

**XX XX XX**

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–*IVA* | ಬೆಂಗಳೂರು, ಶುಕ್ರವಾರ, ಜುಲೈ ೧೫, ೨೦೧೬ (ಆಷಾಢ ೨೪, ಶಕ ವರ್ಷ ೧೯೩೮) | ನಂ. ೯೨೯ |
| *Part–IVA* | *Bengaluru, Friday, July 15, 2016 (Ashada 24 Shaka Varsha 1938)* | *No. 929* |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/21/Bill/2016, Bengaluru, Dated: 14.07.2016**

The following Bill was introduced in Legislative Assembly on 14.07.2016

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಹತ್ತನೇ ಅಧಿವೇಶನ**

**ಕರ್ನಾಟಕ ಸ್ಟಾಂಪು (ನಾಲ್ಕನೇ ತಿದ್ದುಪಡಿ) ವಿಧೇಯಕ, 2016**

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ–21)**

ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸ್ಟಾಂಪು ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 34) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸ್ಟಾಂಪು (ನಾಲ್ಕನೇ ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು 2016ರ ಜೂನ್ 22ರಿಂದ ಜಾರಿಗೆ ಬರಲಾಗಿದೆ ಎಂದು ಭಾವಿಸತಕ್ಕದ್ದು.

**2. ಅನುಸೂಚಿಯ ತಿದ್ದುಪಡಿ.–** ಕರ್ನಾಟಕ ಸ್ಟಾಂಪು ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 34) ಅನುಸೂಚಿಯ 30ನೇ ಅನುಚ್ಛೇದದಲ್ಲಿ (2)ನೇ ಬಾಬಿನ ತರುವಾಯ, ಈ ಮುಂದಿನವನ್ನು ಸೇರಿತಕ್ಕದ್ದು, ಎಂದರೆ:–

"

| "ಲಿಖಿತ ಪತ್ರದ ವಿವರಣೆ | ಸೂಕ್ತ ಸ್ಟಾಂಪು ಸುಂಕ |
|---|---|
| "(3) ಮೇಲಿನ (1) ಮತ್ತು (2)ನೇ ಖಂಡಗಳಲ್ಲಿ ಏನೇ ಒಳಗೊಂಡಿದ್ದರೂ,–<br>(ಎ) ಗಣಿಗಾರಿಕೆ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದ (MDPA) ಹಾಗೂ ಅಥವಾ ಹರಾಜುಗಳ ಮೂಲಕ ಮಂಜೂರಾದ ಗಣಿಗಾರಿಕೆ ಗೇಣಿಯು:– | |
| (i) ಒಂದು ವರ್ಷಕ್ಕೆ ಮೇಲ್ಪಟ್ಟು ಆದರೆ ಹತ್ತು ವರ್ಷಗಳನ್ನು ಮೀರದ ಅವಧಿಗೆ ಇದೆಯೆಂದು ತಾತ್ಪರ್ಯವಾಗುವಲ್ಲಿ | ಅನುಮೋದಿತ ಗಣಿಗಾರಿಕೆ ಯೋಜನೆಯನುಸಾರ ಅಂದಾಜು ಸರಾಸರಿ ವಾರ್ಷಿಕ ಉತ್ಪಾದನೆಯ ಮೇಲೆ ಲೆಕ್ಕಹಾಕಿದ ಹರಾಜಿನಲ್ಲಿ ಪಡೆದಿರುವ ಅಂತಿಮ ದರದ ಆಧಾರದ ಮೇರೆಗೆ ಸರಾಸರಿ ವಾರ್ಷಿಕ ರಾಯಧನ ಮತ್ತು ಸರಾಸರಿ ವಾರ್ಷಿಕ ಸಂದಾಯದ ಒಟ್ಟು ಮೊಬಗಿನ ಅಥವಾ ಮೌಲ್ಯದ ಮೇಲೆ ಪ್ರತಿ ಒಂದು ನೂರು ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಒಂದು ರೂಪಾಯಿ. |

| | |
|---|---|
| (ii) ಹತ್ತು ವರ್ಷಗಳಿಗೆ ಮೇಲ್ಪಟ್ಟು ಆದರೆ ಇಪ್ಪತ್ತು ವರ್ಷಗಳಿಗೆ ಮೀರದ ಅವಧಿಗೆ ಇದೆಯೆಂದು ತಾತ್ಪರ್ಯವಾಗುವಲ್ಲಿ | ಅನುಮೋದಿತ ಗಣಿಗಾರಿಕೆ ಯೋಜನೆಯನುಸಾರ ಅಂದಾಜು ಸರಾಸರಿ ವಾರ್ಷಿಕ ಉತ್ಪಾದನೆಯ ಮೇಲೆ ಲೆಕ್ಕಹಾಕಿದ ಹರಾಜಿನಲ್ಲಿ ಪಡೆದಿರುವ ಅಂತಿಮ ದರದ ಆಧಾರದ ಮೇರೆಗೆ ಸರಾಸರಿ ವಾರ್ಷಿಕ ರಾಯಧನ ಮತ್ತು ಸರಾಸರಿ ವಾರ್ಷಿಕ ಸಂದಾಯದ ಒಟ್ಟು ಮೊಬಗಿನ ಅಥವಾ ಮೌಲ್ಯದ ಮೇಲೆ ಪ್ರತಿ ಒಂದು ನೂರು ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಎರಡು ರೂಪಾಯಿಗಳು. |
| (iii) ಇಪ್ಪತ್ತು ವರ್ಷಗಳಿಗೆ ಮೇಲ್ಪಟ್ಟು ಆದರೆ ಮೂವತ್ತು ವರ್ಷಗಳಿಗೆ ಮೀರದ ಅವಧಿಗೆ ಇದೆಯೆಂದು ತಾತ್ಪರ್ಯವಾಗುವಲ್ಲಿ | ಅನುಮೋದಿತ ಗಣಿಗಾರಿಕೆ ಯೋಜನೆಯನುಸಾರ ಅಂದಾಜು ಸರಾಸರಿ ವಾರ್ಷಿಕ ಉತ್ಪಾದನೆಯ ಮೇಲೆ ಲೆಕ್ಕಹಾಕಿದ ಹರಾಜಿನಲ್ಲಿ ಪಡೆದಿರುವ ಅಂತಿಮ ದರದ ಆಧಾರದ ಮೇರೆಗೆ ಸರಾಸರಿ ವಾರ್ಷಿಕ ರಾಯಧನ ಮತ್ತು ಸರಾಸರಿ ವಾರ್ಷಿಕ ಸಂದಾಯದ ಒಟ್ಟು ಮೊಬಗಿನ ಅಥವಾ ಮೌಲ್ಯದ ಮೇಲೆ ಪ್ರತಿ ಒಂದು ನೂರು ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಮೂರು ರೂಪಾಯಿಗಳು. |
| (iv) ಮೂವತ್ತು ವರ್ಷಗಳಿಗೆ ಮೇಲ್ಪಟ್ಟು ಅಥವಾ ಖಾಯಂ ತಾತ್ಪರ್ಯವಾಗುವಲ್ಲಿ ಅಥವಾ ಯಾವುದೇ ನಿಶ್ಚಿತ ಅವಧಿಗೆ ತಾತ್ಪರ್ಯವಾಗದಿರುವಲ್ಲಿ | ಅನುಮೋದಿತ ಗಣಿಗಾರಿಕೆ ಯೋಜನೆಯನುಸಾರ ಅಂದಾಜು ಸರಾಸರಿ ವಾರ್ಷಿಕ ಉತ್ಪಾದನೆಯ ಮೇಲೆ ಲೆಕ್ಕಹಾಕಿದ ಹರಾಜಿನಲ್ಲಿ ಪಡೆದಿರುವ ಅಂತಿಮ ದರದ ಆಧಾರದ ಮೇರೆಗೆ ಸರಾಸರಿ ವಾರ್ಷಿಕ ರಾಯಧನದ ನಾಲ್ಕರಷ್ಟು ಮತ್ತು ಸರಾಸರಿ ವಾರ್ಷಿಕ ಸಂದಾಯದ ನಾಲ್ಕರಷ್ಟರ ಒಟ್ಟು ಮೊಬಗಿನ ಅಥವಾ ಮೌಲ್ಯದ ಮೇಲೆ ಪ್ರತಿ ಒಂದು ನೂರು ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಐದು ರೂಪಾಯಿಗಳು.<br>ಪರಂತು, ಒಂದು ಸ್ವತ್ತಿಗಾಗಿ ಅಗತ್ಯವಾದ ಮೌಲ್ಯಾನುಸಾರ ಸ್ಟಾಂಪು ಸಹಿತವಾಗಿ ಗಣಿಗಾರಿಕೆ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದಕ್ಕೆ ಗಣಿಗಾರಿಕೆ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದದೊಡನೆ ಗಣಿಗಾರಿಕೆ ಗೇಣಿಗೆ ಹಾಗೂ ಗಣಿಗಾರಿಕೆ ಗೇಣಿಗೆ ಯುಕ್ತವಾಗಿ ಸ್ಟಾಂಪು ಹಾಕಲಾದ ಮತ್ತು ಅಂಥ ಗಣಿಗಾರಿಕೆ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದಕ್ಕನುಸಾರವಾಗಿ ಗುತ್ತಿಗೆಯನ್ನು ಬರೆದುಕೊಡಲಾದ ಯಾವುದೇ ಸಂದರ್ಭದಲ್ಲಿ, ಅಂಥ ಗಣಿಗಾರಿಕೆ ಗೇಣಿಯ ಮೇಲಿನ ಸುಂಕವು ಐವತ್ತು ರೂಪಾಯಿಗಳನ್ನು ಮೀರತಕ್ಕದ್ದಲ್ಲ. |
| (ಬಿ) ಗಣಿಗಾರಿಕೆ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದ (MDPA) ಹಾಗೂ ಅಥವಾ ಹರಾಜುಗಳ ಹೊರತಾಗಿ ಮಂಜೂರಾದ ಗಣಿಗಾರಿಕೆ | |
| (i) ಒಂದು ವರ್ಷಕ್ಕೆ ಮೇಲ್ಪಟ್ಟು ಆದರೆ ಹತ್ತು ವರ್ಷಗಳನ್ನು ಮೀರದ ಅವಧಿಗೆ ಇದೆಯೆಂದು ತಾತ್ಪರ್ಯವಾಗುವಲ್ಲಿ | ಅನುಮೋದಿತ ಗಣಿಗಾರಿಕೆ ಯೋಜನೆಯನುಸಾರ ಪ್ರೀಮಿಯಂ, ಮುಂಗಡ ಹಣ, ಭದ್ರತಾ ಠೇವಣಿ ಮತ್ತು ರುಸುಮಿನ ಅಂದಾಜು ಸರಾಸರಿ ವಾರ್ಷಿಕ ಉತ್ಪಾದನೆಯ ಮೇಲೆ ಸರಾಸರಿ ವಾರ್ಷಿಕ ರಾಯಧನ ಮತ್ತು ಲೆಕ್ಕಹಾಕಿದ ಖನಿಜ ಮೌಲ್ಯದ ಷೇರಿನ ಸರಾಸರಿ ವಾರ್ಷಿಕ ಸಂದಾಯದ ಪ್ರತಿ ಒಂದು ನೂರು ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಒಂದು ರೂಪಾಯಿ. |
| (ii) ಹತ್ತು ವರ್ಷಗಳಿಗೆ ಮೇಲ್ಪಟ್ಟು ಆದರೆ ಇಪ್ಪತ್ತು ವರ್ಷಗಳಿಗೆ ಮೀರದ ಅವಧಿಗೆ ಇದೆಯೆಂದು ತಾತ್ಪರ್ಯವಾಗುವಲ್ಲಿ | ಅನುಮೋದಿತ ಗಣಿಗಾರಿಕೆ ಯೋಜನೆಯನುಸಾರ ಪ್ರೀಮಿಯಂ, ಮುಂಗಡ ಹಣ, ಭದ್ರತಾ ಠೇವಣಿ ಮತ್ತು ರುಸುಮಿನ ಅಂದಾಜು ಸರಾಸರಿ ವಾರ್ಷಿಕ ಉತ್ಪಾದನೆಯ ಮೇಲೆ ಸರಾಸರಿ ವಾರ್ಷಿಕ ರಾಯಧನ ಮತ್ತು ಲೆಕ್ಕಹಾಕಿದ ಖನಿಜ ಮೌಲ್ಯದ ಷೇರಿನ ಸರಾಸರಿ ವಾರ್ಷಿಕ ಸಂದಾಯದ ಪ್ರತಿ ಒಂದು ನೂರು ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಎರಡು ರೂಪಾಯಿಗಳು. |
| (iii) ಇಪ್ಪತ್ತು ವರ್ಷಗಳಿಗೆ ಮೇಲ್ಪಟ್ಟು ಆದರೆ ಮೂವತ್ತು ವರ್ಷಗಳಿಗೆ ಮೀರದ ಅವಧಿಗೆ ಇದೆಯೆಂದು ತಾತ್ಪರ್ಯವಾಗುವಲ್ಲಿ | ಅನುಮೋದಿತ ಗಣಿಗಾರಿಕೆ ಯೋಜನೆಯನುಸಾರ ಪ್ರೀಮಿಯಂ, ಮುಂಗಡ ಹಣ, ಭದ್ರತಾ ಠೇವಣಿ ಮತ್ತು ರುಸುಮಿನ ಅಂದಾಜು ಸರಾಸರಿ ವಾರ್ಷಿಕ ಉತ್ಪಾದನೆಯ ಮೇಲೆ ಸರಾಸರಿ ವಾರ್ಷಿಕ ರಾಯಧನ ಮತ್ತು ಲೆಕ್ಕಹಾಕಿದ ಖನಿಜ ಮೌಲ್ಯದ ಷೇರಿನ ಸರಾಸರಿ ವಾರ್ಷಿಕ ಸಂದಾಯದ ಪ್ರತಿ ಒಂದು ನೂರು ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಮೂರು ರೂಪಾಯಿಗಳು. |

| | |
|---|---|
| (iv) ಮೂವತ್ತು ವರ್ಷಗಳಿಗೆ ಮೇಲ್ಪಟ್ಟು ಅಥವಾ ಖಾಯಂ ತಾತ್ಪರ್ಯವಾಗುವಲ್ಲಿ ಅಥವಾ ಯಾವುದೇ ನಿಶ್ಚಿತ ಅವಧಿಗೆ ತಾತ್ಪರ್ಯವಾಗದಿರುವಲ್ಲಿ | ಅನುಮೋದಿತ ಗಣಿಗಾರಿಕೆ ಯೋಜನೆಯನುಸಾರ ಪ್ರೀಮಿಯಂ, ಮುಂಗಡ ಹಣ, ಭದ್ರತಾ ಠೇವಣಿ ಮತ್ತು ರುಸುಮಿನ ಅಂದಾಜು ಸರಾಸರಿ ವಾರ್ಷಿಕ ಉತ್ಪಾದನೆಯ ಮೇಲೆ ಸರಾಸರಿ ವಾರ್ಷಿಕ ರಾಯಧನ ಮತ್ತು ಲೆಕ್ಕಹಾಕಿದ ಖನಿಜ ಮೌಲ್ಯದ ಷೇರಿನ ಸರಾಸರಿ ವಾರ್ಷಿಕ ಸಂದಾಯದ ಅಥವಾ ಅಂದಾಜು ಸಂಪನ್ಮೂಲಗಳ ಮೌಲ್ಯದ ಮೇಲೆ ಯಾವುದು ಹೆಚ್ಚೋ ಅದರ ಪ್ರತಿ ಒಂದು ನೂರು ರೂಪಾಯಿಗಳಿಗೆ ಅಥವಾ ಅದರ ಭಾಗಕ್ಕೆ ಐದು ರೂಪಾಯಿಗಳು;<br>ಪರಂತು, ಒಂದು ಸ್ವತ್ತಿಗಾಗಿ ಅಗತ್ಯವಾದ ಮೌಲ್ಯಾನುಸಾರ ಸ್ಟಾಂಪು ಸಹಿತವಾಗಿ ಗಣಿಗಾರಿಕೆ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದಕ್ಕೆ ಗಣಿಗಾರಿಕೆ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದದೊಡನೆ ಗಣಿಗಾರಿಕೆ ಗೇಣಿಗೆ ಹಾಗೂ ಗಣಿಗಾರಿಕೆ ಗೇಣಿಗೆ ಯುಕ್ತವಾಗಿ ಸ್ಟಾಂಪು ಹಾಕಲಾದ ಮತ್ತು ಅಂಥ ಗಣಿಗಾರಿಕೆ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದಕ್ಕನುಸಾರವಾಗಿ ಗುತ್ತಿಗೆಯನ್ನು ಬರೆದುಕೊಡಲಾದ ಯಾವುದೇ ಸಂದರ್ಭದಲ್ಲಿ, ಅಂಥ ಗಣಿಗಾರಿಕೆ ಗೇಣಿಯ ಮೇಲಿನ ಸುಂಕವು ಐವತ್ತು ರೂಪಾಯಿಗಳನ್ನು ಮೀರತಕ್ಕದ್ದಲ್ಲ.<br>**ವಿವರಣೆ:** (1) ಈ ಅನುಚ್ಛೇದದಲ್ಲಿ "ಮುಂಗಡವಾಗಿ ನೀಡಿದ ಹಣ ಮತ್ತು ಭದ್ರತಾ ಠೇವಣಿ" ಪದಾವಳಿಯು ಯಾವುದೇ ಇತರ ಪಾವತಿಗಳೆಡೆಗೆ ಮರುಪಾವತಿಯಾಗಲಿ ಅಥವಾ ಹೊಂದಾಣಿಕೆಯಾಗಲೀ ನಿರ್ವಹಣಾ ಖಾತರಿ ಒಳಗೊಂಡ ಮುಂಗಡವಾಗಿ ನೀಡಿದ ಹಣ ಮತ್ತು ಭದ್ರತಾ ಠೇವಣಿಯೆಂಬ ಅರ್ಥ ಮತ್ತು ಇದನ್ನು ಒಳಗೊಳ್ಳುತ್ತದೆ.<br>(2) "ಅಂದಾಜು ಸಂಪನ್ಮೂಲಗಳ ಮೌಲ್ಯ" ವು ಖನಿಜಗಳ (ಅಟಾಮಿಕ್ ಅಂಡ್ ಹೈಡ್ರೋ ಕಾರ್ಬನ್ಸ್ ಎನರ್ಜಿ ಮಿನರಲ್ಸ್ ಹೊರತುಪಡಿಸಿ) ರಿಯಾಯಿತಿ ನಿಯಮಗಳು, 2016 ರಲ್ಲಿನ ಅದೇ ಅರ್ಥವನ್ನು ಹೊಂದಿರತಕ್ಕದ್ದು. |

"

**3. ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಸ್ಟಾಂಪು (ತಿದ್ದುಪಡಿ) ಅಧ್ಯಾದೇಶ, 2016ನ್ನು (2016ರ ಕರ್ನಾಟಕ ಅಧ್ಯಾದೇಶ 02) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ತಿದ್ದುಪಡಿಯಾದಂತೆ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೂಲಕ ತಿದ್ದುಪಡಿಯಾದಂತೆ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಗಣಿಗಳು ಮತ್ತು ಖನಿಜಗಳು (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ, 1957 (1957ರ ಕೇಂದ್ರ ಅಧಿನಿಯಮ ಸಂಖ್ಯೆ 67) "ಗಣಿಗಾರಿಕೆ ಗೇಣಿ" ಪದವನ್ನು ಗಣಿಗಾರಿಕೆ ಕಾರ್ಯಾಚರಣೆಗಳನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ಮಂಜೂರು ಮಾಡಿದ ಗೇಣಿ ಎಂದು ಪರಿಭಾಷಿಸುತ್ತದೆ ಮತ್ತು ಮುಂದುವರೆದು "ಗಣಿಗಾರಿಕೆ ಕಾರ್ಯಾಚರಣೆಗಳು" ಪದವನ್ನು ಯಾವುದೇ ಖನಿಜವನ್ನು ಹೊರತೆಗೆಯುವ ಉದ್ದೇಶಕ್ಕಾಗಿ ಕೈಗೊಂಡ ಯಾವುದೇ ಕಾರ್ಯಾಚರಣೆಗಳು ಎಂದು ಪರಿಭಾಷಿಸುತ್ತದೆ. ಗಣಿಗಾರಿಕೆ ಗೇಣಿಯು, ಗಣಿಗಾರಿಕೆ ಕಾರ್ಯಾಚರಣೆಗಳು ಮತ್ತು ಗಣಿಗಾರಿಕೆ ಹಕ್ಕುಗಳ ನಿಯಂತ್ರಣಕ್ಕಾಗಿ ವಿನ್ಯಾಸಗೊಳಿಸಿದ ಒಂದು ಅಗತ್ಯ ಲಿಖಿತಪತ್ರವಾಗಿದೆ. ಅದು ಸ್ಥಿರಾಸ್ತಿ ಗೇಣಿಯ ಎಲ್ಲಾ ವೈಶಿಷ್ಟ್ಯಗಳಿಗೆ ಸಂಪೂರ್ಣವಾಗಿ ಅನುರೂಪವಾಗಿರುವುದಿಲ್ಲ. ಖಾಸಗಿ ಒಡೆತನದ ಮತ್ತು ಗಣಿಗಾರಿಕೆ ಗೇಣಿ ಪ್ರದೇಶದ ಭಾಗವಾಗಿರುವ ಸಾಧ್ಯತೆಯನ್ನು ಸಹ ಗಣಿಗಳು ಮತ್ತು ಖನಿಜಗಳು (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ, 1957ರ ಹಾಗೂ ಕರ್ನಾಟಕ ಸಣ್ಣ ಖನಿಜಗಳ ರಿಯಾಯಿತಿ ನಿಯಮಗಳು, 1994ರ ಅಡಿಯಲ್ಲಿ ಬಹಳ ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಆದುದರಿಂದ, ಗಣಿಗಾರಿಕೆ ಗೇಣಿಗಳನ್ನು ಸ್ಥಿರಾಸ್ತಿಗಳ ಗೇಣಿಯಿಂದ ಬೇರೆಯಾಗಿ ಪರಿಗಣಿಸಿ, ಸ್ಟಾಂಪು ಸುಂಕದ ಉದ್ದೇಶಕ್ಕಾಗಿ ಇರುವ ದಸ್ತಾವೇಜುಗಳ ಪ್ರತ್ಯೇಕ ವರ್ಗವಾಗಿ ಗಣಿಗಾರಿಕೆ ಗೇಣಿಗಳನ್ನು ವರ್ಗೀಕರಿಸುವ ಅಗತ್ಯವಿದೆ. ಹರಾಜಿನ ಮೂಲಕ ಮಂಜೂರು ಮಾಡಿದ ಅಥವಾ ಹರಾಜಿನ ಹೊರತಾಗಿ ಬೇರೆ ರೀತಿಯಾಗಿ ಮಂಜೂರು ಮಾಡಿದ ಗೇಣಿಗಾಗಿ ಪ್ರತ್ಯೇಕ ಉಪಬಂಧಗಳನ್ನು ಸಹ ಕಲ್ಪಿಸಲಾಗಿದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು, ದಿನಾಂಕ:30.07.2015ರ ತನ್ನ ಆದೇಶದಲ್ಲಿ, ಹೆಚ್ಚುವರಿ ಷರತ್ತುಗಳ ಸಹಿತ, ಗಣಿಗಳು ಮತ್ತು ಖನಿಜಗಳ (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ, 1957ರ ಮತ್ತು ಖನಿಜ (ಹರಾಜು) ನಿಯಮಗಳು, 2015ರ ತಿದ್ದುಪಡಿಗಳಿಗನುಸಾರವಾಗಿ ಆದೇಶದ ದಿನಾಂಕದಿಂದ 32 ವಾರಗಳ, ಆದರೆ ಸಾಧ್ಯವಾದಷ್ಟು 26 ವಾರಗಳ ಬಾಹ್ಯ ಪರಿಮಿತಿಯೊಳಗಾಗಿ 15 'ಸಿ' ಪ್ರವರ್ಗ ಗಣಿಗಳ ಹರಾಜನ್ನು ನಡೆಸಲು ರಾಜ್ಯ ಸರ್ಕಾರಕ್ಕೆ ನಿರ್ದೇಶಿಸಿದೆ.

ಮಾನ್ಯ ಸರ್ವೋಚ್ಛ ನ್ಯಾಯಾಲಯವು ನಿಗದಿಪಡಿಸಿದ ಕಾಲಮಿತಿಯು ಈಗಾಗಲೇ ಮಾರ್ಚ್ 2016ರಲ್ಲಿ ಕೊನೆಗೊಂಡಿದೆ ಮತ್ತು ಈ ಸಂಬಂಧವಾಗಿ ಗಣಿಗಳ ಹರಾಜಿಗಾಗಿ ಸಮಯವನ್ನು ವಿಸ್ತರಿಸಲು ಮಾನ್ಯ ಸರ್ವೋಚ್ಛ ನ್ಯಾಯಾಲಯದ ಮುಂದೆ ವಾದಕಾಲೀನ ಅರ್ಜಿಯನ್ನು ದಾಖಲಿಸಲಾಗಿದೆ. ವಾಣಿಜ್ಯ ಮತ್ತು ಕೈಗಾರಿಕೆಗಳ ಇಲಾಖೆಯು ದಾಖಲಿಸಿದ ವಾದಕಾಲೀನ ಅರ್ಜಿಗೆ ಸಂಬಂಧಿಸಿದಂತೆ ಮಾನ್ಯ ಸರ್ವೋಚ್ಛ ನ್ಯಾಯಾಲಯವು ಇದುವರೆಗೆ ಯಾವುದೇ ತೀರ್ಮಾನವನ್ನು ಕೈಗೊಂಡಿರುವುದಿಲ್ಲ. ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಆಯುಕ್ತರು ಈಗಾಗಲೇ ನಾಲ್ಕು ಬಾರಿ ವಾರ್ಷಿಕ ಕಾರ್ಯಕ್ರಮ ಪಟ್ಟಿಯನ್ನು (Calender of events) ವಿಸ್ತರಿಸಿದ್ದಾರೆ. ಗಣಿಗಾರಿಕೆ ಗೇಣಿ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದ (ಎಂಡಿಪಿಎ) ಹಾಗೂ ಗಣಿಗಾರಿಕೆ ಗೇಣಿ ಪತ್ರದ ಮೇಲೆ ಸ್ಟಾಂಪು ಸುಂಕ ಮತ್ತು ನೋಂದಣಿ ಶುಲ್ಕಕ್ಕೆ ಸಂಬಂಧಪಟ್ಟಂತೆ ಬಿಡ್ಡರ್‌ಗಳಿಗೆ ಸ್ಪಷ್ಟೀಕರಣ ನೀಡುವ ಸಲುವಾಗಿ ಗಣಿ ಮತ್ತು ಭೂವಿಜ್ಞಾನಗಳ ಇಲಾಖೆಯ ಆಯುಕ್ತರಿಗೆ ಈ ಶಾಸನವನ್ನು ರಚಿಸುವುದು ಅತ್ಯಂತ ಅಗತ್ಯವಾಗಿದೆ. ಬಿಡ್ಡರ್‌ಗಳಿಗೆ ಸ್ಪಷ್ಟೀಕರಣ ನೀಡುವುದಕ್ಕಾಗಿ ನಿಗದಿಪಡಿಸಿದ ಅಂತಿಮ ದಿನಾಂಕವು 22.06.2016 ಆಗಿದೆ. ಪ್ರಸ್ತಾವಿತ ಶಾಸನವನ್ನು ಈ ದಿನಾಂಕಕ್ಕೆ ಮೊದಲು ಅಂಗೀಕರಿಸಬೇಕಾದ ಅಗತ್ಯವಿದೆ. ವಿಷಯವನ್ನು ಮತ್ತಷ್ಟು ವಿಳಂಬಗೊಳಿಸಿದರೆ ಆಗ ಮಾನ್ಯ ಸರ್ವೋಚ್ಛ ನ್ಯಾಯಾಲಯವು ಅದನ್ನು ಗಂಭೀರವಾಗಿ ಪರಿಗಣಿಸುವುದರಿಂದ ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಉಂಟಾದ ವಿಳಂಬದ ಕುರಿತು ವಿವರಣೆ ನೀಡುವಲ್ಲಿ ರಾಜ್ಯ ಸರ್ಕಾರಕ್ಕೆ ಸಂಧಿಗ್ದ ಪರಿಸ್ಥಿತಿಯು ಉಂಟಾಗುವುದು.

ಗಣಿ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದ ಎಂದು ಕರೆಯಲಾಗುವ ಹೊಸ ಲಿಖಿತಪತ್ರವನ್ನು ಖನಿಜಗಳ (ಹರಾಜು) ನಿಯಮಗಳು, 2015 ಮತ್ತು ಖನಿಜಗಳ (ಅಟಾಮಿಕ್ ಅಂಡ್ ಹೈಡ್ರೋಕಾರ್ಬನ್ಸ್ ಎನರ್ಜಿ ಮಿನರಲ್ಸ್ ಹೊರತುಪಡಿಸಿ) ರಿಯಾಯಿತಿ ನಿಯಮಗಳು, 2016ರ ಮೂಲಕ ಮಂಡಿಸಲಾಗಿದೆ ಮತ್ತು ಅವುಗಳನ್ನು ಸಹ ಸ್ಟಾಂಪು ಸುಂಕದ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸಬೇಕಾದ ಅಗತ್ಯವಿದೆ.

ವಿಷಯವು ಅತ್ಯಂತ ತುರ್ತು ಸ್ವರೂಪದ್ದಾಗಿರುವುದರಿಂದ ಮತ್ತು ಕರ್ನಾಟಕ ವಿಧಾನಸಭೆಯು ಅಧಿವೇಶನದಲ್ಲಿ ಇಲ್ಲದೇ ಇದ್ದುದರಿಂದ, ಕರ್ನಾಟಕ ಸ್ಟಾಂಪು (ತಿದ್ದುಪಡಿ) ಅಧ್ಯಾದೇಶ, 2016ನ್ನು (2016ರ ಕರ್ನಾಟಕ ಅಧ್ಯಾದೇಶ ಸಂಖ್ಯೆ.02) ದಿನಾಂಕ. 22.06.2016ರಂದು ಪ್ರಖ್ಯಾಪಿಸಲಾಗಿತ್ತು.

ಸದರಿ ಅಧ್ಯಾದೇಶಕ್ಕೆ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಗಳ 80ನೇ ನಿಯಮದ (1)ನೇ ಉಪನಿಯಮದ ಮೂಲಕ ಅಗತ್ಯಪಡಿಸಲಾದಂತೆ ವಿವರಣಾತ್ಮಕ ಹೇಳಿಕೆ**

ಗಣಿಗಳು ಮತ್ತು ಖನಿಜಗಳು (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ, 1957 (1957ರ ಕೇಂದ್ರ ಅಧಿನಿಯಮ ಸಂಖ್ಯೆ 67) "ಗಣಿಗಾರಿಕೆ ಗೇಣಿ" ಪದವನ್ನು ಗಣಿಗಾರಿಕೆ ಕಾರ್ಯಾಚರಣೆಗಳನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ಮಂಜೂರು ಮಾಡಿದ ಗೇಣಿ ಎಂದು ಪರಿಭಾಷಿಸುತ್ತದೆ ಮತ್ತು ಮುಂದುವರೆದು "ಗಣಿಗಾರಿಕೆ ಕಾರ್ಯಾಚರಣೆಗಳು" ಪದವನ್ನು ಯಾವುದೇ ಖನಿಜವನ್ನು ಹೊರತೆಗೆಯುವ ಉದ್ದೇಶಕ್ಕಾಗಿ ಕೈಗೊಂಡ ಯಾವುದೇ ಕಾರ್ಯಾಚರಣೆಗಳು ಎಂದು ಪರಿಭಾಷಿಸುತ್ತದೆ. ಗಣಿಗಾರಿಕೆ ಗೇಣಿಯು, ಗಣಿಗಾರಿಕೆ ಕಾರ್ಯಾಚರಣೆಗಳು ಮತ್ತು ಗಣಿಗಾರಿಕೆ ಹಕ್ಕುಗಳ ನಿಯಂತ್ರಣಕ್ಕಾಗಿ ವಿನ್ಯಾಸಗೊಳಿಸಿದ ಒಂದು ಅಗತ್ಯ ಲಿಖಿತಪತ್ರವಾಗಿದೆ. ಅದು ಸ್ಥಿರಾಸ್ತಿ ಗೇಣಿಯ ಎಲ್ಲಾ ವೈಶಿಷ್ಟ್ಯಗಳಿಗೆ ಸಂಪೂರ್ಣವಾಗಿ ಅನುರೂಪವಾಗಿರುವುದಿಲ್ಲ. ಖಾಸಗಿ ಒಡೆತನದ ಮತ್ತು ಗಣಿಗಾರಿಕೆ ಗೇಣಿ ಪ್ರದೇಶದ ಭಾಗವಾಗಿರುವ ಸಾಧ್ಯತೆಯನ್ನು ಸಹ ಗಣಿಗಳು ಮತ್ತು ಖನಿಜಗಳು (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ, 1957ರ ಹಾಗೂ ಕರ್ನಾಟಕ ಸಣ್ಣ ಖನಿಜಗಳ ರಿಯಾಯಿತಿ ನಿಯಮಗಳು, 1994ರ ಅಡಿಯಲ್ಲಿ ಬಹಳ ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಆದುದರಿಂದ, ಗಣಿಗಾರಿಕೆ ಗೇಣಿಗಳನ್ನು ಸ್ಥಿರಾಸ್ತಿಗಳ ಗೇಣಿಯಿಂದ ಬೇರೆಯಾಗಿ ಪರಿಗಣಿಸಿ, ಸ್ಟಾಂಪು ಸುಂಕದ ಉದ್ದೇಶಕ್ಕಾಗಿ ಇರುವ ದಸ್ತಾವೇಜುಗಳ ಪ್ರತ್ಯೇಕ ವರ್ಗವಾಗಿ ಗಣಿಗಾರಿಕೆ ಗೇಣಿಗಳನ್ನು ವರ್ಗೀಕರಿಸುವ ಅಗತ್ಯವಿದೆ. ಹರಾಜಿನ ಮೂಲಕ ಮಂಜೂರು ಮಾಡಿದ ಅಥವಾ ಹರಾಜಿನ ಹೊರತಾಗಿ ಬೇರೆ ರೀತಿಯಾಗಿ ಮಂಜೂರು ಮಾಡಿದ ಗೇಣಿಗಾಗಿ ಪ್ರತ್ಯೇಕ ಉಪಬಂಧಗಳನ್ನು ಸಹ ಕಲ್ಪಿಸಲಾಗಿದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು, ದಿನಾಂಕ:30.07.2015ರ ತನ್ನ ಆದೇಶದಲ್ಲಿ, ಹೆಚ್ಚುವರಿ ಷರತ್ತುಗಳ ಸಹಿತ, ಗಣಿಗಳು ಮತ್ತು ಖನಿಜಗಳ (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ, 1957ರ ಮತ್ತು ಖನಿಜ (ಹರಾಜು) ನಿಯಮಗಳು, 2015ರ ತಿದ್ದುಪಡಿಗಳಿಗನುಸಾರವಾಗಿ ಆದೇಶದ ದಿನಾಂಕದಿಂದ 32 ವಾರಗಳ, ಆದರೆ ಸಾಧ್ಯವಾದಷ್ಟು 26 ವಾರಗಳ ಬಾಹ್ಯ ಪರಿಮಿತಿಯೊಳಗಾಗಿ 15 'ಸಿ' ಪ್ರವರ್ಗ ಗಣಿಗಳ ಹರಾಜನ್ನು ನಡೆಸಲು ರಾಜ್ಯ ಸರ್ಕಾರಕ್ಕೆ ನಿರ್ದೇಶಿಸಿದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ನಿಗದಿಪಡಿಸಿದ ಕಾಲಮಿತಿಯು ಈಗಾಗಲೇ ಮಾರ್ಚ್ 2016ರಲ್ಲಿ ಕೊನೆಗೊಂಡಿದೆ ಮತ್ತು ಈ ಸಂಬಂಧವಾಗಿ ಗಣಿಗಳ ಹರಾಜಿಗಾಗಿ ಸಮಯವನ್ನು ವಿಸ್ತರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ಮುಂದೆ ವಾದಕಾಲೀನ ಅರ್ಜಿಯನ್ನು ದಾಖಲಿಸಲಾಗಿದೆ. ವಾಣಿಜ್ಯ ಮತ್ತು ಕೈಗಾರಿಕೆಗಳ ಇಲಾಖೆಯು ದಾಖಲಿಸಿದ ವಾದಕಾಲೀನ ಅರ್ಜಿಗೆ ಸಂಬಂಧಿಸಿದಂತೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಇದುವರೆಗೆ ಯಾವುದೇ ತೀರ್ಮಾನವನ್ನು ಕೈಗೊಂಡಿರುವುದಿಲ್ಲ. ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಆಯುಕ್ತರು ಈಗಾಗಲೇ ನಾಲ್ಕು ಬಾರಿ ವಾರ್ಷಿಕ ಕಾರ್ಯಕ್ರಮ ಪಟ್ಟಿಯನ್ನು (Calender of events) ವಿಸ್ತರಿಸಿದ್ದಾರೆ. ಗಣಿಗಾರಿಕೆ ಗೇಣಿ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದ (ಎಂಡಿಪಿಎ) ಹಾಗೂ ಗಣಿಗಾರಿಕೆ ಗೇಣಿ ಪತ್ರದ ಮೇಲೆ ಸ್ಟಾಂಪು ಸುಂಕ ಮತ್ತು ನೋಂದಣಿ ಶುಲ್ಕಕ್ಕೆ ಸಂಬಂಧಪಟ್ಟಂತೆ ಬಿಡ್ಡರ್‌ಗಳಿಗೆ ಸ್ಪಷ್ಟೀಕರಣ ನೀಡುವ ಸಲುವಾಗಿ ಗಣಿ ಮತ್ತು ಭೂವಿಜ್ಞಾನಗಳ ಇಲಾಖೆಯ ಆಯುಕ್ತರಿಗೆ ಈ ಶಾಸನವನ್ನು ರಚಿಸುವುದು ಅತ್ಯಂತ ಅಗತ್ಯವಾಗಿದೆ. ಬಿಡ್ಡರ್‌ಗಳಿಗೆ ಸ್ಪಷ್ಟೀಕರಣ ನೀಡುವುದಕ್ಕಾಗಿ ನಿಗದಿಪಡಿಸಿದ ಅಂತಿಮ ದಿನಾಂಕವು 22.06.2016 ಆಗಿದೆ. ಪ್ರಸ್ತಾವಿತ ಶಾಸನವನ್ನು ಈ ದಿನಾಂಕಕ್ಕೆ ಮೊದಲು ಅಂಗೀಕರಿಸಬೇಕಾದ ಅಗತ್ಯವಿದೆ. ವಿಷಯವನ್ನು ಮತ್ತಷ್ಟು ವಿಳಂಬಗೊಳಿಸಿದರೆ ಆಗ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಅದನ್ನು ಗಂಭೀರವಾಗಿ ಪರಿಗಣಿಸುವುದರಿಂದ ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಉಂಟಾದ ವಿಳಂಬದ ಕುರಿತು ವಿವರಣೆ ನೀಡುವಲ್ಲಿ ರಾಜ್ಯ ಸರ್ಕಾರಕ್ಕೆ ಸಂಧಿಗ್ಧ ಪರಿಸ್ಥಿತಿಯು ಉಂಟಾಗುವುದು.

ಗಣಿ ಅಭಿವೃದ್ಧಿ ಮತ್ತು ಉತ್ಪಾದನಾ ಒಪ್ಪಂದ ಎಂದು ಕರೆಯಲಾಗುವ ಹೊಸ ಲಿಖಿತಪತ್ರವನ್ನು ಖನಿಜಗಳ (ಹರಾಜು) ನಿಯಮಗಳು, 2015 ಮತ್ತು ಖನಿಜಗಳ (ಅಟಾಮಿಕ್ ಅಂಡ್ ಹೈಡ್ರೋಕಾರ್ಬನ್ಸ್ ಎನರ್ಜಿ ಮಿನರಲ್ಸ್ ಹೊರತುಪಡಿಸಿ) ರಿಯಾಯಿತಿ ನಿಯಮಗಳು, 2016ರ ಮೂಲಕ ಮಂಡಿಸಲಾಗಿದೆ ಮತ್ತು ಅವುಗಳನ್ನು ಸಹ ಸ್ಟಾಂಪು ಸುಂಕದ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸಬೇಕಾದ ಅಗತ್ಯವಿದೆ.

ವಿಷಯವು ಅತ್ಯಂತ ತುರ್ತು ಸ್ವರೂಪದ್ದಾಗಿರುವುದರಿಂದ ಮತ್ತು ಕರ್ನಾಟಕ ವಿಧಾನಸಭೆಯು ಅಧಿವೇಶನದಲ್ಲಿ ಇಲ್ಲದೇ ಇದ್ದುದರಿಂದ, ಕರ್ನಾಟಕ ಸ್ಟಾಂಪು (ತಿದ್ದುಪಡಿ) ಅಧ್ಯಾದೇಶ, 2016ನ್ನು (2016ರ ಕರ್ನಾಟಕ ಅಧ್ಯಾದೇಶ ಸಂಖ್ಯೆ.02) ದಿನಾಂಕ. 22.06.2016ರಂದು ಪ್ರಖ್ಯಾಪಿಸಲಾಗಿತ್ತು.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಕಾಗೋಡು ತಿಮ್ಮಪ್ಪ**
ಕಂದಾಯ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TENTH SESSION**
**THE KARNATAKA STAMP (FOURTH AMENDMENT) Bill, 2016**
**(L.A. Bill No. 21 of 2016)**

A Bill further to amend the Karnataka Stamp Act, 1957.

Whereas it is expedient further to amend the Karnataka Stamp Act, 1957 (Karnataka Act 34 of 1957) for the purposes hereinafter appearing;

Be it enacted by the Karnataka State Legislature in the Sixty-seventh Year of Republic of India as follows:-

**1. Short title and commencement.–** (1) This Act may be called the Karnataka Stamp Fourth Amendment) Act, 2016.

(2) It shall be deemed to have come into force with effect from the 22nd day of June, 2016.

**2. Amendment of schedule.-** In the Karnataka Stamp Act, 1957, (Karnataka Act 34 of 1957) in the schedule, in the article 30, after item (2), the following article shall be inserted, namely:-

| Description of Instrument | Proper Stamp Duty |
|---|---|
| "(3) Notwithstanding anything contained in clause (1) and (2) above, in respect of,- **(a)** Mine Development and Production Agreement (MDPA) and or Mining Lease granted through auctions:- | |
| (i) where the lease purports to be for a term exceeding one year and not exceeding ten years. | One rupee for every one hundred rupees or part thereof on the total amount or value of; the average annual royalty and average annual payment based on the final price offer obtained in the auction calculated on the estimated average annual production as per the approved mining plan. |
| (ii) where the lease purports to be for a term exceeding ten years and not exceeding twenty years | Two rupees for every one hundred rupees or part thereof on the total amount or value of; the average annual royalty and average annual payment based on the final price offer obtained in the auction calculated on the estimated average annual production as per the approved mining plan. |
| (iii) where the lease purports to be for a term exceeding twenty years and not exceeding thirty years | Three rupees for every one hundred rupees or part thereof on the total amount or value of; the average annual royalty and average annual payment based on the final price offer obtained in the auction calculated on the estimated average annual production as per the approved mining plan. |
| (iv) where the lease purports to be for a term exceeding thirty years or in perpetuity or does not purport to be for any definite term. | Five rupees for every one hundred rupees or part thereof on the total amount or value of; four times the average annual royalty and four times the average annual payment based on the final price offer obtained in the auction calculated on the estimated average annual production as per the approved mining plan<br>Provided that in any case when Mine Development And Production Agreement (MDPA) is duly stamped with the ad valorem stamp required for MDPA as well as for a mining lease and a mining lease in pursuance of such Mine Development And Production Agreement is subsequently executed, the duty on such mining lease shall not exceed rupees fifty: |
| **(b):** Mine Development and Production Agreement (MDPA) and or Mining Lease granted other than by auctions. | |
| (i) where the lease purports to be for a term exceeding one year and not exceeding ten years. | One rupee for every one hundred rupees or part thereof on the total amount or value of; the average annual royalty and average annual payment as share of value of mineral calculated on the estimated average annual production as per the approved mining plan, premium, money advanced, security deposit and fine. |
| (ii) where the lease purports to be for a term exceeding ten years and not exceeding twenty years | Two rupees for every one hundred rupees or part thereof on the total amount or value of; the average annual royalty and average annual payment as share of value of mineral calculated on the estimated average annual production as per the approved mining plan, premium, money advanced, security deposit and fine. |
| (iii) where the lease purports to be for a term exceeding twenty years and not exceeding thirty years | Three rupees for every one hundred rupees or part thereof on the total amount or value of; the average annual royalty and average annual payment as share of value of mineral calculated on the estimated average annual production as per the approved mining plan, premium, money advanced, security deposit and fine. |

| | |
|---|---|
| (iv) where the lease purports to be for a term exceeding thirty years or in perpetuity or does not purport to be for any definite term. | Five rupees for every one hundred rupees or part thereof on the total amount or value of; four times the average annual royalty and four times the average annual payment as share of value of mineral calculated on the estimated average annual production as per the approved mining plan, premium, money advanced, security deposit and fine; or on the value of Estimated Resources whichever is higher;<br>Provided that in any case when Mine Development And Production Agreement (MDPA) is duly stamped with the ad valorem stamp required for MDPA as well as for mining lease and a mining lease in pursuance of such Mine Development And Production Agreement is subsequently executed, the duty on such mining lease shall not exceed rupees fifty:<br>**Explanation:** (1) The term "money advanced and security deposit" in this Article means and includes the money advanced and security deposit including performance guarantee whether refundable or adjustable towards any other payments.<br>(2) "Value of Estimated Resources" shall have the same meaning as that in the Minerals (Other than Atomic and Hydro Carbons Energy Minerals) Concession Rules, 2016. |

"

**3. Repeal and savings.-** (1) The Karnataka Stamp (Amendment) ordinance, 2016 (Karnataka ordinance 2 of 2016) is hereby repealed.

(2) Notwithstanding such repeal anything done or any action taken under the Principal Act as amended by the said Ordinance shall be deemed to have been done or taken under the principal Act as amended by this Act.

**STATEMENT OF OBJECTS AND REASONS**

Mines and Mineral (Development and Regulation) Act, 1957 (Central Act 67 of 1957) Act defines a "mining lease" as a lease granted for the purpose of undertaking mining operations, and further defines "mining operations" as any operations undertaken for the purpose of winning any mineral. Mining lease is essentially an instrument designed for regulation of mining operations and mining rights. It does not fully conform to all the characteristics of a lease of immovable property. The Possibility of privately owned and being part of the mining lease area is also very clearly contemplated under the Mines and Mineral (Development and Regulation) Act, 1957 as well as the Karnataka Minor Minerals Concession Rules, 1994. Therefore, there is a need to classify mining leases as a separate class of documents for the purpose of stamp duty, distinct from lease of immovable property. Separate provisions are also provided for lease granted by auction and granted by way other than auction.

Hon'ble Supreme Court in its order dated: 30.07.2015 has directed the State Government to conduct the auction of 15 'C' Category mines within outer limit of 32 weeks, preferably 26 weeks from the date of order in accordance with the amendments of Mines and Minerals (Development and Regulation) Act, 1957 and the Mineral (Auction) Rules, 2015 along with additional conditions.

The time line fixed by the Hon'ble Supreme Court has already expired in March, 2016 and in this connection an Interlocutory Application has been filed before the Hon'ble Supreme Court for extending time for auction of mines. The Hon'ble Supreme Court has not yet decided on Interlocutory Application filed by the Commerce and Industries Department. The Commissioner, Department of Mines and Geology has already extended the calendar of events four times. Making this legislation is very essential for the Commissioner, Department of Mines and Geology to give clarification to the bidders with respect to stamp duty and registration fee on the Mining Lease Development and Production Agreement (MDPA) and mining Lease Deed. The last date for giving clarification to the bidders is 22.06.2016. proposed legislation needs to be passed before this date. If the matter is further delayed then the Hon'ble Supreme Court may take it seriously and it will create a very difficult position for the State Government to explain the delay in the matter.

A new instrument called the Mine Development and Production Agreement has been introduced by the Minerals (Auction) Rules, 2015 and the Minerals (Other than Atomic and

Hydrocarbons Energy) Minerals Rule 2016, and they also need to be specified for the purpose of stamp duty.

As the matter was urgent and the Karnataka Legislative Assembly was not in session, the Karnataka Stamp (Amendment) ordinance, 2016 (Karnataka ordinance 2 of 2016) was promulgated on 22.06.2016.

This bill seeks to replace the said ordinance.

Hence the Bill.

**EXPLANATORY STATEMENT AS REQUIRED BY SUB-RULE (1) OF RULE 80 OF THE RULES OF PROCEDURE AND CONDUCT OF BUSINESS IN THE KARNATAKA LEGISLATIVE ASSEMBLY**

Mines and Mineral (Development and Regulation) Act, 1957 (Central Act 67 of 1957) Act defines a "mining lease" as a lease granted for the purpose of undertaking mining operations, and further defines "mining operations" as any operations undertaken for the purpose of winning any mineral. Mining lease is essentially an instrument designed for regulation of mining operations and mining rights. It does not fully conform to all the characteristics of a lease of immovable property. The Possibility of privately owned and being part of the mining lease area is also very clearly contemplated under the Mines and Mineral (Development and Regulation) Act, 1957 as well as the Karnataka Minor Minerals Concession Rules, 1994. Therefore, there is a need to classify mining leases as a separate class of documents for the purpose of stamp duty, distinct from lease of immovable property. Separate provisions are also provided for lease granted by auction and granted by way other than auction.

Hon'ble Supreme Court in its order dated: 30.07.2015 has directed the State Government to conduct the auction of 15 'C' Category mines within outer limit of 32 weeks, preferably 26 weeks from the date of order in accordance with the amendments of Mines and Minerals (Development and Regulation) Act, 1957 and the Mineral (Auction) Rules, 2015 along with additional conditions.

The time line fixed by the Hon'ble Supreme Court has already expired in March, 2016 and in this connection an Interlocutory Application has been filed before the Hon'ble Supreme Court for extending time for auction of mines. The Hon'ble Supreme Court has not yet decided on Interlocutory Application filed by the Commerce and Industries Department. The Commissioner, Department of Mines and Geology has already extended the calendar of events four times. Making this legislation is very essential for the Commissioner, Department of Mines and Geology to give clarification to the bidders with respect to stamp duty and registration fee on the Mining Lease Development and Production Agreement (MDPA) and mining Lease Deed. The last date for giving clarification to the bidders is 22.06.2016. proposed legislation needs to be passed before this date. If the matter is further delayed then the Hon'ble Supreme Court may take it seriously and it will create a very difficult position for the State Government to explain the delay in the matter.

A new instrument called the Mine Development and Production Agreement has been introduced by the Minerals (Auction) Rules, 2015 and the Minerals (Other than Atomic and Hydrocarbons Energy) Minerals Rule 2016, and they also need to be specified for the purpose of stamp duty.

As the matter was urgent and the Karnataka Legislative Assembly was not in session, the Karnataka Stamp (Amendment) ordinance, 2016 (Karnataka ordinance 2 of 2016) was promulgated on 22.06.2016.

**FINANCIAL MEMORANDUM**

There is no extra expenditure involved in the proposed legislative measure.

**KAGODU THIMMAPPA**
MINISTER FOR REVENUE

**S.Murthy**
Secretary (I/C)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ-*IVA* | ಬೆಂಗಳೂರು, ಸೋಮವಾರ, ಜುಲೈ ೧೮, ೨೦೧೬ (ಆಷಾಢ ೨೭, ಶಕ ವರ್ಷ ೧೯೩೮) | ನಂ. ೯೩೧ |
|---|---|---|
| ***Part–IVA*** | ***Bengaluru, Monday, July 18, 2016 (Ashada 27 Shaka Varsha 1938)*** | ***No. 931*** |



**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ/ಆ–1/151/ಕಾನೇ/2016, ಬೆಂಗಳೂರು, ದಿನಾಂಕ: 18–07–2016**

2003ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(i)ರ ಪ್ರಕಾರ ಮಾನ್ಯ ವಿಶೇಷ ಮಂಡಳಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಕಾರ್ಯದರ್ಶಿ(ಪ್ರಭಾರ)ದಲ್ಲಿ ಕಾರ್ಯನಿರ್ವಹಿಸುತ್ತಿರುವ **ಶ್ರೀ ಶ್ರೀನಿವಾಸ** ಇವರನ್ನು ವೇತನ ಶ್ರೇಣಿ ₹ 56550–1350–60600–1500–69600–1700–79800ರಲ್ಲಿ ಕಾರ್ಯದರ್ಶಿ ಹುದ್ದೆಗೆ ದಿನಾಂಕ: 01.06.2016 ರಿಂದ ಜಾರಿಗೆ ಬರುವಂತೆ ಸ್ಥಾನಪನ್ನ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಮಾನ್ಯ ವಿಶೇಷ ಮಂಡಳಿಯ ಆದೇಶಾನುಸಾರ

**ವೆಂಕನಗೌಡ ಪಾಟೀಲ್**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

*RNI No. KARBIL/2001/47147*

ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ರಾಜ್ಯ ಪತ್ರಿಕೆ

| ಭಾಗ–*IVA* | ಬೆಂಗಳೂರು, ಸೋಮವಾರ, ಜುಲೈ ೧೮, ೨೦೧೬ (ಆಷಾಢ ೨೭, ಶಕ ವರ್ಷ ೧೯೩೮) | ನಂ. ೯೩೩ |
|---|---|---|
| *Part–IVA* | *Bengaluru, Monday, July 18, 2016 (Ashada 27 Shaka Varsha 1938)* | *No. 933* |

**KARNATAKA LEGISLATIVE ASSEMBLY SECRETARIAT**
**NOTIFICATION**
**No. KLA/LGA/22/Bill/2016, Bengaluru, Dated: 18.07.2016**

The following Bill was introduced in Legislative Assembly on 18.07.2016

**ಕರ್ನಾಟಕ ವಿಧಾನಸಭೆ**

**ಹದಿನಾಲ್ಕನೇ ವಿಧಾನಸಭೆ**

**ಹತ್ತನೇ ಅಧಿವೇಶನ**

# ಕರ್ನಾಟಕ ಧನವಿನಿಯೋಗ (ಸಂಖ್ಯೆ.2) ವಿಧೇಯಕ, 2016

**(2016ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 22)**

**2016–17**ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

**2016–17**ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ :

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ.

**1. ಸಂಕ್ಷಿಪ್ತ ಹೆಸರು.–** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಸಂಖ್ಯೆ.2) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ 2016–17**ನೇ ಹಣಕಾಸು ವರ್ಷಕ್ಕಾಗಿ 1**7209716.50** ಲಕ್ಷ ರೂಪಾಯಿಗಳ ನೀಡಿಕೆ. ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ 2016–17ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ (2016ರ ಕರ್ನಾಟಕ ಅಧಿನಿಯಮ ಸಂಖ್ಯೆ:4 ರಲ್ಲಿ ಸಂದಾಯ ಮಾಡಲು ಅಧಿಕಾರ ನೀಡಲಾದ 5730835.59 ಲಕ್ಷ ರೂ.ಗಳನ್ನು ಒಳಗೊಂಡಂತೆ) ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ **ಒಂದು ಲಕ್ಷದ ಎಪ್ಪತ್ತೆರಡು ಸಾವಿರದ ತೊಂಬತ್ತೇಳು ಕೋಟಿ ಹದಿನಾರು ಲಕ್ಷ ಹಾಗೂ ಐವತ್ತು ಸಾವಿರ** ರೂಪಾಯಿಗಳು ಮೀರದಷ್ಟು ಮೊಬಲಗನ್ನು ಮಾತ್ರ ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು.

**3. ಧನವಿನಿಯೋಗ.–** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

